## ೬. ಪಂಚರತ್ನ ಕೀರ್ತನೆಗಳು

**1.** ಗೌಳ ಆದಿತಾಳ ತ್ಯಾಗರಾಜರು

ಪಲ್ಲವಿ : ದುಡುಕುಗಲ ನನ್ನೇ ದೊರ ಕೊಡುಕು ಬ್ರೋಚುರಾ ? ಯೆಂತೋ ||

ಅನುಪಲ್ಲವಿ : ಕಡುದುರ್ವಿಷಯಾಕೃಷ್ಟುಡೈ–ಗಡಿಯ ಗಡಿಯಕು ನಿಂಡಾರು ||

ಚರಣ : 1. ಶ್ರೀ ವನಿತಾ ಹೃತ್ಕುಮುದಾಂಬುಜಾ ವಾಙ್ಮಾನಸ ಗೋಚರ ||

2. ಸಕಲ ಭೂತ ಮುಲಯಂದು ನೀ ವೈಯುುಂಡಗ ಮದಿಲೇಕ ಪೋಯಿನ ||

3. ಚಿರುತ ಪ್ರಾಯಮುನಾಡೆ ಭಜನಾಮೃತ ರಸವಿಹೀನ ಕುತರ್ಕುಡೈನ ||

4. ಪರಧನಮುಲುಕೊರಕು ನೊರುಲ ಮದಿನಿ ಕರಗ
ಬಲಿಕಿ ಕಡುಪುನಿಂಪ ದಿರಿಗಿನಟ್ಟಿ ||

5. ತನಮದಿನಿ ಭುವಿನಿ ಸೌಖ್ಯಪು ಜೀವನಮೆಯನುಚು
ಸದಾ ದಿನಮುಲು ಗಡಿಪೆ ||

6. ತೆಲಿಯನಿ ನಟವಿಟ ಶೂದ್ರುಲು ವನಿತುಲು
ಸ್ವವಶವಹೌಟಕುಪ
ದೇಶಿಂಚಿ ಸಂತಸಿಲ್ಲಿ ಸ್ವರ ಲಯಂಬು ಲೇರುಂಗಕನು
ಶಿಲಾತ್ಮುಲೈ ಸುಭಕ್ತುಲಕು ಸಮಾನಮನು ||

7. ದೃಷ್ಟಿಕಿ ಸಾರಂಬಗು ಲಲನಾ ಸದನಾರ್ಭಕ
ಸೇನಾಮಿತ ಧನಾದುಲನು
ದೇವ ದೇವ ! ನೆರನಮ್ಮಿತಿನಿ ಗಾಕನು ಪದಾಬ್ಜ
ಭಜನಂಬು ಮರಚಿನ ||

8. ಚಕ್ಕನಿ ಮುಖಕಮಲಂಬುನು ಸದಾ ನಾ ಮದಿಲೋ ಸ್ಮರಣ
ಲೇಕನೇ ದುರ್ಮದಾಂಧ ಜನುಲಗೋರಿ ಪರಿತಾಪಮುಲಚೇ ದಗಿಲಿ
ನೊಗಿಲಿ ದುರ್ವಿಷಯ ದುರಾಸಲನು ರೋಯಲೇಕ ಸತತ
ಮಪರಾಧಿನೈ ಚಪಲ ಚಿತ್ತುಡನೈನ ||

9. ಮಾನವತನು ದುರ್ಲಭಮನುಚು ನೆಂಚಿ ಪರಮಾನಂದ
ಮೊಂದಲೇಕ ಮದ ಮತ್ಸರ ಕಾಮಲೋಭ ಮೋಹಮುಲಕು ದಾಸುಡೈ
ಮೋಸಬೋತಿಗಾಕ ಮೊದಟಿ ಕುಲಜುಡಗುಚು ಭುವಿನಿ ಶೂದ್ರುಲ
ಪನುಲು ಸಲ್ಪುಚುನು ಯುಂಟಿನಿಗಾಕ, ನರಾಧಮುಲನು ಗೋರಿ ಸಾರ
ಹೀನ ಮತಮುಲನು ಸಾಧಿಂಪದಾರುಮಾರು ||

10. ಸತುಲಕೈ ಕೊನ್ನಾಳ್ಳಾಸ್ತಿಕೈ ಸುತುಲಕೈ ಕೊನ್ನಾಳ್ಳು ಧನ
ತತುಲಕ್ಕೆ ದಿರಿಗಿತಿನಯ್ಯ ತ್ಯಾಗರಾಜಾಪ್ತ ! ಯಿಟುವಂಟಿ ||

ಅರ್ಥ : ಎಂತೋ–ಎಷ್ಟೋ ; ದುಡುಕುಗಲ ನನ್ನ–ಕೆಟ್ಟಕೆಲಸಗಳನ್ನು ಮಾಡಿದ ನನ್ನನ್ನು ; ವೆದೊರ

ಕೊಡುಕು–ಯಾವ ರಾಜಕುಮಾರನು ; ಬ್ರೋಚುರಾ–ಕಾಪಾಡುವನಯ್ಯ ? ಕಡುದುರ್ವಿಷಯು–ಕ್ರೂರವಾದ ವಿಷಯ ಭೋಗಗಳಿಂದ ; ಆಕೃಷ್ಟುಡ್ನೈ–ಸೆಳೆತಕ್ಕೆ ಸಿಕ್ಕಿದ ; ಗಡಿಯ ಗಡಿಯಕು ನಿಂಡಾರು–ಗಳಿಗೆಗಳಿಗೆಗೂ ದುಷ್ಕೃತ್ಯಗಳಿಂದ ತುಂಬಿದ, ನನ್ನನ್ನು ಬೇರೆ ಯಾರು ರಕ್ಷಿಸುವರಯ್ಯ ?

ಶ್ರೀವನಿತಾ–ಲಕ್ಷ್ಮಿಯ ; ಹೃತ್ಕುಮುದಾಂಬುಜಾ–ಹೃದಯವೆಂಬ ಕನ್ನೈದಿಲೆಗೆ ಚಂದ್ರನಂತಿರುವವನೇ (ಅಂಬು + ಜ–ಸಾಗರದಿಂದ ಉದಿಸಿದ ಚಂದ್ರ) ; ವಾಙ್ಮನಸಾಗೋಚರ–ಮಾತುಮನಸ್ಸುಗಳಿಗೆ ಅಗೋಚರನಾದವನೆ ; ಸಕಲ ಭೂತಮುಲಯಂದು–ಸಕಲ ಜೀವ ರಾಶಿಗಳಲ್ಲಿಯೂ, ನೀವ್ವೈಯುಂಡಗ–ನೀನೇ ಅಂತರ್ಯಾಮಿಯಾಗಿರುವುದನ್ನು ; ಮದಿಲೇಕಪೋಯಿನ–ತಿಳಿದುಕೊಳ್ಳದೆ ಹೋದ ನನ್ನನ್ನು ; ಚಿರುತಪ್ರಾಯಮು ನಾಡೆ–ಬಾಲ್ಯಯೌವನಗಳಲ್ಲಿ ; ಭಜನಾಮೃತರಸವಿಹೀನ–ನಿನ್ನ ಭಜನೆಯೆಂಬ ಅಮೃತರಸವನ್ನು ಸವಿಯದೆ ; ಕುತರ್ಕುಡೈನ–ಕುತರ್ಕಗಳಲ್ಲಿ ತೊಡಗಿದ ನನ್ನನ್ನು ; ಪರಧನಮುಲುಕೊರಕುನ–ಪರರ ಸಂಪತ್ತಿಗೆ ಆಶಿಸಿ ; ಒರುಲಮದಿನಿ–ಬೇರೊಬ್ಬರ ಮನಸ್ಸನ್ನು ; ಕರಗಬಲಿಕಿ–ಗಾಸಿಗೊಳ್ಳುವಂತೆ ಮಾತನಾಡಿ ; ಕಡುಪುನಿಂಪ–ಹೊಟ್ಟೆ ಹೊರೆದುಕೊಳ್ಳುವುದಕ್ಕಾಗಿ ; ತಿರಿಗಿನಟ್ಟಿ–ಅಲೆದಾಡಿದ ನನ್ನನ್ನು ; ತನಮದಿನಿ–ಮನಸ್ಸಿನಲ್ಲಿ ; ಭುವಿನಿ ಸದಾ ಸೌಖ್ಯವು ಜೀವನಮೆ–ಈ ಭೂಮಿಯಲ್ಲಿ ಭೋಗಜೀವನವೇ ಶಾಶ್ವತ ಎಂದು ; ದಿನಮುಲುಗಡಿಪೆ–ದಿನಗಳೆದ ನನ್ನನ್ನು ; ತೆಲಿಯನಿ–ತಿಳಿಯದೆ ; ನಟವಿಟ ಶೂದ್ರುಲು ವನಿತಲು–ನಟವಿಟ ಶೂದ್ರರು ಮತ್ತು ಸ್ತ್ರೀಯರನ್ನು ; ಸ್ವವಶಮೌಟಕುಪದೇಶಿಂಚಿ–ನನ್ನ ವಶವಾಗಬೇಕೆಂದು ಉಪದೇಶಿಸುತ್ತಾ ; ಸಂತಸಿಲ್ಲಿ–ಅದರಲ್ಲಿ ಸಂತೋಷಪಡುತ್ತಾ ; ಸ್ವರಲಯಂಬುಲು ಎರುಂಗಕನು–ಸ್ವರಲಯಗಳನ್ನು ಅರಿಯದವನಾಗಿ ; ಶಿಲಾತ್ಮುಡೈ–ಕಲ್ಲಿನಂತೆ ಕಠಿಣವಾದ ಹೃದಯವುಳ್ಳವನಾಗಿ ; ಸುಭಕ್ತುಲಕು ಸಮಾನಮನು–ನಾನು ಸದ್ಭಕ್ತರಿಗೆ ಸಮನೆಂದು ಹೇಳಿಕೊಂಡೆನಲ್ಲ, ಅಂಥ ನನ್ನನ್ನು ; ದೇವದೇವ–ಪರಮಾತ್ಮನೇ ; ದೃಷ್ಟಿ–ನೋಟಕ್ಕೆ ; ಸಾರಂಬಗು–ಸಾರವತ್ತಾಗಿ ಕಾಣುವ ; ಲಲನಾ ಸದನಾ ಅರ್ಭಕ ಸೇನಾ ಅಮಿತ ಧನಾದುಲನು–ಹೆಣ್ಣು ಮನೆ ಮಗ ಸೇನೆ ಅಪಾರ ಸಂಪತ್ತು ಮೊದಲಾದವುಗಳನ್ನು ; ನೆರನಮ್ಮಿತಿಗಾಕನು–ಚೆನ್ನಾಗಿ ನಂಬಿಬಿಟ್ಟೆನೇ ಹೊರತು : ಪದಾಬ್ಜ ಭಜನಂಬು ಮರಚಿನ–ನಿನ್ನ ಪಾದಕಮಲಗಳ ಭಜನೆಯನ್ನು ಮರೆತುಬಿಟ್ಟ ನನ್ನನ್ನು ; ಚಕ್ಕನಿ ಮುಖ ಕಮಲಂಬುನು–ನಿನ್ನ ದಿವ್ಯಸುಂದರವಾದ ಮುಖಕಮಲವನ್ನು ; ಸದಾ–ಯಾವಾಗಲೂ ; ನಾಮದಿಲೋ–ನನ್ನ ಮನಸ್ಸಿನಲ್ಲಿ ; ಸ್ಮರಣಲೇಕನೇ–ಸ್ಮರಿಸದೆ ; ದುರ್ಮದಾಂಧ ಜನುಲಗೋರಿ–ಅಹಂಕಾರದಿಂದ ಕುರುಡರಾಗಿರುವ ಜನರನ್ನು ಯಾಚಿಸುತ್ತಾ ; ಪರಿತಾಪಮುಲಚೇ–ಪರಿತಾಪದಿಂದ ; ತಗಿಲಿ ನೊಗಿಲಿ–ನೊಂದುಬೆಂದು ; ದುರ್ವಿಷಯ ದುರಾಸಲನು–ದುಷ್ಟ ಆಸೆ ಆಕಾಂಕ್ಷೆಗಳಿಂದ ; ಸತತಮುರೋಯಲೇಕ–ಮಿತಿಯೇ ಇಲ್ಲದೆ ಸದಾ ; ಅಪರಾಧಿಯೈ ಚಪಲಚಿತ್ತುಡೈನ–ಅಪರಾಧಿಯೂ ಚಪಲಚಿತ್ತನೂ ಆದ ನನ್ನನ್ನು ; ಮಾನವ ತನು–ಮನುಷ್ಯದೇಹವು ; ದುರ್ಲಭಮನುಚುನೆಂಚಿ–ದುರ್ಲಭವಾದುದೆಂದು ಭಾವಿಸಿ ; ಪರಮಾನಂದ ಮೊಂದಲೇಕ–ಅಪಾರವಾಗಿ ಸಂತೋಷವನ್ನು ಸವಿಯದೆ ; ಮೋಸಬೋತಿಗಾಕ–ಮೋಸಹೋದೆನೇ ಹೊರತು ; ಮೊದಟಿಕುಲಜುಡಗುಚು–ಶ್ರೇಷ್ಠವಾದ ಕುಲದಲ್ಲಿ ಜನಿಸಿದರೂ ; ಭುವಿನಿ ಶೂದ್ರುಲ ಪನುಲು ಸಲ್ಪುಚುನುಯುಂಟಿನಿ ಗಾಕ–ಶೂದ್ರರ ಕೆಲಸಗಳಲ್ಲಿ (ಇಲ್ಲಿ ಅಜ್ಞಾನದಿಂದ ತುಂಬಿದ ಕೆಟ್ಟ ಕೆಲಸಗಳೆಂದು ಅರ್ಥ) ತೊಡಗಿರುತ್ತಿದ್ದೆನೇ ಹೊರತು ; ನರಾಧಮುಲನು ಗೋರಿ–ಹೀನರಾದ

ವರನ್ನು ಯಾಚಿಸಿ ; ಸಾರಹೀನ ಮತಮುಲನು–ಸಾರಹೀನವಾದ ಮತಗಳನ್ನು ; ತಾರು ಮಾರು–ಸಾಧಿಸಲು ಮನಸ್ಸನ್ನು ತಾರುಮಾರಾಗಿ ಅಲೆದಾಡಿಸಿದ ನನ್ನನ್ನು ; ಸತುಲಕ್ಕೈ–ಹೆಂಡಿರಿಗಾಗಿ ; ಕೊನ್ನಾಳ್ಳು–ಕೆಲವು ಕಾಲ ; ಆಸ್ತಿಕ್ಕೈ ಸುತುಲಕ್ಕೈ–ಆಸ್ತಿಗಾಗಿ ಮಕ್ಕಳಿಗಾಗಿ; ಕೊನ್ನಾಳ್ಳು–ಸ್ವಲ್ಪಕಾಲ ; ಧನತತುಲಕ್ಕೈ–ಸಿರಿಸಂಪತ್ತಿಗಾಗಿ ; ತಿರಿಗಿತಿನಯ್ಯ–ಅಲೆದಾಡಿದೆ ನಯ್ಯ ; ತ್ಯಾಗರಾಜಾಪ್ತ–ತ್ಯಾಗರಾಜನಿಗೆ ಆಪ್ತನಾದ ಶ್ರೀರಾಮಚಂದ್ರನೆ, ಇಟುವಂಟಿ–ಇಷ್ಟೆಲ್ಲ ಮಾಡಿರುವ, ನನ್ನನ್ನು ಬೇರೆ ಯಾವನು ರಕ್ಷಿಸುವನಯ್ಯ !

ತಾತ್ಪರ್ಯ : ಕಡು ದುರ್ವಿಷಯ ಭೋಗಗಳ ಸೆಳೆತಕ್ಕೆ ಸಿಕ್ಕಿರುವ ನನ್ನನ್ನು ಬೇರೆ ಯಾರು ತಾನೆ ರಕ್ಷಿಸಬಲ್ಲರಯ್ಯ ?

ಸಕಲ ಜೀವರಾಶಿಗಳಲ್ಲಿ ನೀನೇ ಅಂತರ್ಯಾಮಿಯಾಗಿರುವೆಯೆಂದು ನಾನು ತಿಳಿಯದೆ ಹೋದೆ. ಬಾಲ್ಯ ಯೌವನಗಳಲ್ಲಿ ಭಜನಾಮೃತವನ್ನು ಸವಿಯದೆ ಕುತರ್ಕ ವ್ಯರ್ಥವಾದಗಳಲ್ಲಿ ಕಾಲಕಳೆದೆ ; ಪರಧನವನ್ನು ಆಶಿಸಿ ಅವರು ನೋಯುವಂತೆ ಮಾತಾಡಿದೆ ; ಭೋಗಜೀವನವೇ ಸರ್ವಶ್ರೇಷ್ಠ ಎಂದು ಪರಿಗಣಿಸಿ ದಿನಗಳನ್ನು ಕಳೆದುಬಿಟ್ಟೆ ; ಹೀನಮನುಜರನ್ನು ವಶಪಡಿಸಿ ಕೊಂಡು ಅದರಲ್ಲಿ ಸಂತೋಷಪಟ್ಟೆನೇ ಹೊರತು ನಿನ್ನ ಗಾನ ಮಾಡಲಿಲ್ಲ ; ಹೆಂಡಿರು ಮಕ್ಕಳು ಮನೆ ಸಿರಿ ಸಂಪತ್ತುಗಳನ್ನು ನಂಬಿದೆನೇ ಹೊರತು ನಿನ್ನ ಪಾದಕಮಲಗಳನ್ನು ನಂಬಲಿಲ್ಲ ; ನಿನ್ನ ದಿವ್ಯಸುಂದರವಾದ ಮುಖವನ್ನು ಮನಸ್ಸಿನಲ್ಲಿ ಸದಾ ನೆನೆಯದೆ, ದುರ್ಜನ ರೆದುರಿಗೆ ಕೈಯೊಡ್ಡಿ, ದುರಾಶೆಯಿಂದ ನೊಂದು ಬೆಂದು ಸತತವೂ ಅಪರಾಧಿಯಾದೆ. ಮಾನವ ಜನ್ಮವು ಸರ್ವೋತ್ಕೃಷ್ಟವೆಂಬುದನ್ನು ಅರಿತು ಸಂತೋಷಪಡದೆ, ಮದ ಮತ್ಸರ ಕಾಮ ಲೋಭ ಮೋಹಗಳಿಗೆ ದಾಸನಾಗಿ ಮೋಸಹೋದೆ. ಅಷ್ಟೇ ಅಲ್ಲ, ಶ್ರೇಷ್ಠ ಕುಲದಲ್ಲಿ ಹುಟ್ಟಿದ್ದರೂ ಹೀನಕೃತ್ಯಗಳಲ್ಲಿ ನಿರತನಾದೆ, ಹೀನಮತಗಳನ್ನು ಸಾಧಿಸಲು ತಾರುಮಾರಾದೆ ; ನನ್ನ ಬದುಕಿನ ಕೆಲವು ದಿನಗಳನ್ನು ಹೆಂಡಿರಿಗಾಗಿ, ಕೆಲವು ದಿನಗಳನ್ನು ಮಕ್ಕಳಿಗಾಗಿ ಆಸ್ತಿಗಾಗಿ ಸಿರಿಸಂಪತ್ತಿನ ಸಂಗ್ರಹಣೆಗಾಗಿ ವ್ಯಯಮಾಡಿ ಅಲೆದೆನಯ್ಯ ; ಇಂಥ ದುಷ್ಟಕೃತ್ಯಗಳಲ್ಲಿ ಮಗ್ನನಾಗಿ ಹೋದ ನನ್ನನ್ನು ಬೇರೆ ಯಾರು ತಾನೆ ಕಾಪಾಡಬಲ್ಲರಯ್ಯ, ನೀನಲ್ಲದೆ?

2. ಆರಭಿ ಆದಿತಾಳ ತ್ಯಾಗರಾಜರು

ಪಲ್ಲವಿ : ಸಾಧಿಂಚೆನೆ ; ಓ ಮನಸಾ !

ಅನುಪಲ್ಲವಿ : ಬೋಧಿಂಚಿನ ಸನ್ಮಾರ್ಗ ವಚನಮುಲ
ಬೊಂಕು ಜೇಸಿ ತಾ ಬಟ್ಟಿನ ಪಟ್ಟು ||

ಚರಣ : ಸಮಯಾನಿಕಿ ದಗು ಮಾಟಲಾಡೆನೆ

ಎತ್ತುಗಡೆ ಸ್ವರಗಳ ಸಾಹಿತ್ಯ : 1. ದೇವಕೀ ವಸುದೇವುಲ ನೇಗಿಂಚಿನಟು ||
2. ರಂಗೇಶುಡು ಸದ್ಗಂಗಾ ಜನಕುಡು
ಸಂಗೀತ ಸಾಂಪ್ರದಾಯಕುಡು ||
3. ಗೋಪೀ ಜನ ಮನೋರಥ ಮೊಸಂಗ ಲೇಕನೇ
ಗೆಲಿಯುಚೇಸೆಟ್ಟು ವಾಡು ||

4. ವನಿತಲ ಸದಾ ಸೊಕ್ಕ ಜೇಯುಚುನು
ಮ್ರೊಕ್ಕಜೇಸೆ ; ಪರಮಾತ್ಮುಡದಿಯುಗಾಕ ||
5. ಯಶೋದತನಯುಡಂಚು ಮುದಂಬುನನು
ಮುದ್ದು ಬೆಟ್ಟು ನವ್ವು ಚುಂಡುಹರಿ ||
6. ಪರಮ ಭಕ್ತವತ್ಸಲುಡು ಸುಗುಣ
ಪಾರಾವಾರುಂಡಾ ಜನ್ಮ ಮನಘುಡೀ ಕಲಿ
ಬಾಧಲ ದೀರ್ಚುವಾಡನುಚು ನೇ ಹೃದಂ
ಬುಜಮುನ ಜೂಚು ಚುಂಡಗ ||
7. ಹರೇ ರಾಮಚಂದ್ರ ! ರಘುಕುಲೇಶ
ಮೃದು ಸುಭಾಷ ಶೇಷಶಯನ !
ಪರನಾರೀ ಸೋದರಾಜ ! ವಿರಾಜ ತುರಗ !
ರಾಜರಾಜನುತ ! ನಿರಾಮಯಾಪಘನ !
ಸರಸೀರುಹದಲಾಕ್ಷಯನುಚು
ವೇಡುಕೊನ್ನ ನನ್ನು ತಾ ಬ್ರೋವಕನು ||
8. ಶ್ರೀ ವೆಂಕಟೇಶ ! ಸ್ವಪ್ರಕಾಶ ! ಸರ್ವೋನ್ನತ ! ಸಜ್ಜನ
ಮಾನಸನಿಕೇತನ ! ಕನಕಾಂಬರಧರ ! ಲಸನ್ಮಕುಟ
ಕುಂಡಲ ವಿರಾಜಿತ ಹರೇ ! ಯನುಚು ನೇ ಪೊಗಡಗಾ
ತ್ಯಾಗರಾಜಗೇಯುಡು ಮಾನವೇಂದ್ರು
ಡೈನ ರಾಮಚಂದ್ರುಡು
ಸದ್ಭಕ್ತುಲ ನಡತ ಲಿಟ್ಲು ನೇನೇ
ಯಮರಿಕಗಾನಾ ಪೂಜೆಗೊನೆನೇ
ಯುಲಗನಟ್ಟನೇನೇ
ವಿಮುಖಲತೋ ಜೇರಬೋಕುಮನೆನೇ
ವೆತಗಲಿಗಿತೇ ತಾಳುಕೊಮ್ಮನೇನೇ
ದಮಶಮಾದಿ ಸುಖದಾಯಕುಡಗು ಶ್ರೀ
ತ್ಯಾಗರಾಜ ನುತುಡು ಚೆಂತರಾಕನೇ ||

ಅರ್ಥ : ಓ ಮನಸಾ–ಎಲೆ ಮನಸ್ಸೆ ; ಸಾಧಿಂಚೆನೆ–ಸಾಧಿಸಿ ಕೊಂಡೆನಲ್ಲ ! ಬೋಧಿಂಚಿನ–ಉಪದೇಶ ಮಾಡಿದ ; ಸನ್ಮಾರ್ಗ ವಚನಮುಲ–ಸನ್ಮಾರ್ಗೋಪದೇಶಗಳನ್ನು ; ಬೇಂಕುಜೇಸಿ–ಸುಳ್ಳು ಮಾಡಿ ; ತಾಬಟ್ಟಿನ ಪಟ್ಟೆ–ಹಿಡಿದ ಪಟ್ಟನ್ನೇ ಹಿಡಿದು ಸಾಧಿಸಿಕೊಂಡೆ.
ಸಮಯಾನಿಕಿ ದಗುಮಾಟಲಾಡೆನೆ–ಸಮಯಕ್ಕೆ ತಕ್ಕ ಉಚಿತವಾದ ಮಾತುಗಳನ್ನು ಆಡಿದನಲ್ಲ; ರಂಗೇಶುಡು-ರಂಗನಾಥನು ; ಸದ್ಗಂಗಾ ಜನಕುಡು–ಶ್ರೇಷ್ಠವಾದ ಗಂಗೆಯ ಜನಕನು ; ಸಂಗೀತ ಸಾಂಪ್ರದಾಯಕುಡು-ಸಂಗೀತ ಸಂಪ್ರದಾಯಗಳಲ್ಲಿ ಪರಿಣತನು ; ಗೋಪೀ ಜನ ಮನೋರಥಮು -ಗೋಪಿಕಾ ಸ್ತ್ರೀಯರ ಮನಸ್ಸಿನಾಸೆಗಳನ್ನು ; ಒಸಂಗಲೇಕ–ನೆರವೇರಿಸದೆ ; ಗೆಲಿಯುಜೇಸೆಟ್ಟು ವಾಡು-ಅವರನ್ನು ಕುಚೋದ್ಯ ಮಾಡುವವನು ; ವನಿತಲ–ಸ್ತ್ರೀಯರನ್ನು ; ಸದಾ ಸೊಕ್ಕಜೇಯು ಚುನು–ಮೈಮರೆಯುವಂತೆ ಮಾಡುತ್ತಾ ; ಮ್ರೊಕ್ಕಜೇಸೆ ಪರಮಾತ್ಮುಡು–ನಮಸ್ಕರಿಸುವಂತೆ

ಮಾಡಿದ ಪರಮಾತ್ಮನು ; ಅದಿಯುಗಾಕ–ಅದೂ ಅಲ್ಲದೆ ; ಯಶೋದ ತನಯುಡಂಚು–ಯಶೋದೆಯ ಪುತ್ರನೆಂಬುದಾಗಿ ; ಮುದಂಬುನನು–ಮುದದಿಂದ ; ಮುದ್ದು ಬೆಟ್ಟ–ಮುದ್ದಿಸಲು ಬಂದವರನ್ನು ನೋಡಿ ; ನವ್ವುಚುಂಡು ಹರಿ–ನಗುತ್ತಿದ್ದ ಹರಿಯು ; ಪರಮ ಭಕ್ತವತ್ಸಲುಡು–ಭಕ್ತರನ್ನು ಕಾಪಾಡುವವನು ; ಸುಗುಣ ಪಾರಾವಾರುಡು–ಸದ್ಗುಣಗಳ ಸಾಗರವಾದವನು ; ಆಜನ್ಮಮು ಅನಘುಡು–ಹುಟ್ಟಿದಂದಿನಿಂದಲೂ ಪಾಪರಹಿತನಾದವನು ; ಈ ಕಲಿಬಾಧಲದೀರ್ಚುವಾಡು–ಈ ಕಲಿಯುಗದ ಬಾಧೆಗಳನ್ನು ಪರಿಹರಿಸುವವನು ; ಅನುಚು–ಎಂಬುದಾಗಿ ; ನೇ–ನಾನು ; ಹೃದಂಬುಜಮುನ ಜೂಚುಚುಂಡಗ–ಹೃದಯಕಮಲದಲ್ಲಿ ನೋಡಿ ಪರಿಭಾವಿಸುತ್ತಿರಲು ; ಹರೇ, ರಾಮಚಂದ್ರ, ರಘುಕುಲೇಶ, ಮೃದುವಾದ ಮಾತುಳ್ಳವನೆ, ಶೇಷಶಯನ, ಪರನಾರೀ ಸೋದರ, ವಿರಾಜತುರಗ–ಶೋಭಿಸುವ ಗರುಡನನ್ನು ವಾಹನವಾಗಿ ಉಳ್ಳವನು, ರಾಜರಾಜನುತ, ನಿರಾಮಯ–ಪಾಪರಹಿತನೆ, ಸರಸೀರುಜದಲಾಕ್ಷ–ತಾವರೆಯದಳದಂತೆ ಕಣ್ಣುಳ್ಳವನೆ, ಅನುಚು–ಎಂಬುದಾಗಿ ; ವೇಡುಕೊನ್ನ-ಬೇಡಿಕೊಳ್ಳುವ ; ನನ್ನು–ನನ್ನನ್ನು ; ಬ್ರೋವಕನು–ಕಾಪಾಡುವವನು ; ಶ್ರೀ ವೆಂಕಟೇಶನೆ, ಸ್ವಪ್ರಕಾಶನೆ–ತಾನೇತಾನಾಗಿ ಪ್ರಕಾಶಿಸುವವನೆ ; ಸರ್ವೋನ್ನತನೆ, ಸಜ್ಜನ ಮಾನಸ ನಿಕೇತನ–ಸಜ್ಜನರ ಮನಸ್ಸುಗಳಲ್ಲಿ ಮನೆ ಮಾಡಿದವನೆ ; ಕನಕಾಂಬರಧರ–ಚಿನ್ನದ ವಸ್ತ್ರಗಳನ್ನು ಧರಿಸಿದವನೆ ; ಲಸನ್ಮಕುಟಕುಂಡಲ ವಿರಾಜಿತ–ಹೊಳೆಹೊಳೆಯುವ ಕಿರೀಟ ಕುಂಡಲಗಳಿಂದ ಶೋಭಿಸುವವನೆ ; ಹರೇ, ಎಂಬುದಾಗಿ ; ನೇ ವೊಗಡಗ–ನಾನು ಹೊಗಳುತ್ತಿರಲು ; ತ್ಯಾಗರಾಜಗೇಯುಡು–ತ್ಯಾಗರಾಜನಿಂದ ಗಾನಗೊಂಡವನೂ ; ಮಾನವೇಂದ್ರುಡೈನ–ಮಾನವೇಂದ್ರನೂ ಆದ ; ರಾಮುಚಂದ್ರುಡು–ರಾಮುಚಂದ್ರನು ; ಸದ್ಭಕುಲ ನಡತಲು–ಸದ್ಭಕ್ತರ ನಡತೆಗಳು ; ಇಟ್ಲು ನೇನೇ–ಹೀಗೆಯೇ ; ಎಂದುಹೇಳಿದನಲ್ಲ! ನಾ ಪೂಜಗೊನೆನೇ–ನನ್ನ ಪೂಜೆಯನ್ನು ಸ್ವೀಕರಿಸಿದನಲ್ಲ ! .... ವಿಮುಖುಲತೊ–ದುರ್ಜನರೊಂದಿಗೆ ; ಜೇರಬೋಕುಮನೆನೇ–ಸೇರಬೇಡ ಎಂದು ನುಡಿದನಲ್ಲ ! ವೆತಲಿಗಿತೇ–ವ್ಯಥೆಯುಂಟಾದರೆ ; ತಾಳುಕೊಮ್ಮನೇನೇ–ಸಹಿಸಿಕೊಳ್ಳೆಂದನಲ್ಲ ! ದಮಶಮಾದಿ ಸುಖದಾಯಕುಡಗು–ದಮಶಮಾದಿ ಸುಖಗಳನ್ನು ನೀಡುವ ; ಶ್ರೀ ತ್ಯಾಗರಾಜ ನುತುಡು–ತ್ಯಾಗರಾಜನಿಂದ ನುತನಾದ ಶ್ರೀ ರಾಮುಚಂದ್ರನು ; ಚಿಂತರಾಕನೇ–ಹತ್ತಿರಕ್ಕೆ ಬರದೆಯೇ ನಾನು ಇಷ್ಟನ್ನು ಸಾಧಿಸಿದೆನಲ್ಲ !

3. ಶ್ರೀ ಆದಿತಾಳ ತ್ಯಾಗರಾಜರು

ಪಲ್ಲವಿ : ಎಂದರೋ ಮಹಾನುಭಾವು ಲಂದರಿಕಿ ವಂದನಮು

ಅನುಪಲ್ಲವಿ : ಚಂದ್ರವದನುನಿಯಂದ ಚಂದಮುನು ಹೃದಯಾರ
ವಿಂದಮುನ ಜೂಚಿ ಬ್ರಹ್ಮಾನಂದಮನುಭವಿಂಚುವಾ ॥ ರೆಂ ॥

ಚರಣ : ಸಾಮಗಾನಲೋಲ ಮನಸಿಜಲಾವಣ್ಯ
ಧನ್ಯಮೂರ್ಧನ್ಯು ॥ ಲೆಂ ॥

2. ಮಾನಸವನಚರ ವರ ಸಂಚಾರಮು ಸಲಿಪಿ
ಮೂರ್ತಿ ಬಾಗುಗ ಬೊಗಡನೇ ವಾ ॥ ರೆಂ ॥

3. ಸರಗುಣ ಪಾದಮುಲಕು ಸ್ವಾಂತಮನು
ಸರೋಜಮುನು ಸಮರ್ಪಣಮು ಜೇಯುವಾ ॥ ರೆಂ ॥

4. ಪತಿತಪಾವನುಡನೇ ಪರಾತ್ಪರುನಿ ಗುರಿಂಚಿ
ಪರಮಾರ್ಥಮುಗ ನಿಜಮಾ
ರ್ಗಮುತೋನು ಬಾಡುಚುನು ಸಲ್ಲಾಪಮುತೋ
ಸ್ವರಲಯಾದಿ ರಾಗಮುಲ ದೆಲಿಯುವಾ ॥ ರಂ ॥
5. ಹರಿಗುಣ ಮಣಿಮಯ ಸರಮುಲು ಗಳಮುನ
ಶೋಭಿಲ್ಲು ಭಕ್ತಕೋಟುಲಿಲಲೋ
ತೆಲಿವಿತೋ ಚೆಲಿಮಿತೋ ಗರುಣಗಲ್ಗಿ
ಜಗಮೆಲ್ಲನು ಸುಧಾ ದೃಷ್ಟಿ ಚೇ ಬ್ರೋಚುವಾ ॥ ರಂ ॥
6. ಹೊಯಲುಮೀರ ನಡಲು ಗಲ್ಗು ಸರಸುನಿ
ಸದಾ ಕನುಲ ಜೂಚುಚುನ ಪುಲಕ ಶ
ರೀರುಲೈಯಾನಂದ ಪಯೋಧಿ ನಿಮಗ್ನುಲೈ
ಮುದಂಬುನನು ಯುಶಮುಗಲ ವಾ ॥ ರಂ ॥
7. ಪರಮ ಭಾಗವತ ಮೌನಿವರ ಶಶಿ
ವಿಭಾಕರ–ಸನಕ–ಸನಂದನ
ದಿಗೀಶ–ಸುರ–ಕಿಂಪುರುಷ–ಕನಕಕಶಿಪು
ಸುತ–ನಾರದ–ತುಂಬುರು
ಪವನ ಸೂನು–ಬಾಲಚಂದ್ರಧರ–ಶುಕ
ಸರೋಜಭವ–ಭೂಸುರ ವರುಲು
ಪರಮ ಪಾವನಲು ಘನುಲು ಶಾಶ್ವತುಲು
ಕಮಲಭವ ಸುಖಮು ಸದಾನುಭವುಲು ಗಾಕ ॥ ೭೦ ॥
8. ನೀಮೇನು ನಾಮ ವೈಭವಂಬುಲನು
ನೀ ಪರಾಕ್ರಮ ಧೈ
ರ್ಯಮುಲ ಶಾಂತಮಾನಸಮು ನೀವುಲನು
ವಚನ ಸತ್ಯಮುನು, ರಘುವರ ! ನೀಯಡ
ಸದ್ಭಕ್ತಿಯು ಜನಿಂಚಕನು ದುರ್ಮತ ಮುಲನು
ವಲ್ಲ ಜೇಸಿನಟ್ಟಿ ನೀ ಮದಿ
ನೆರಿಂಗಿ ಸಂತಸಂಬುನನು ಗುಣ ಭಜನಾ
ನಂದ ಕೀರ್ತನಮು ಜೇಯುವಾ ॥ ರಂ ॥
9. ಭಾಗವತ-ರಾಮಾಯಣ-ಗೀತಾದಿ
ಶ್ರುತಿ ಶಾಸ್ತ್ರ ಪುರಾಣಪು
ಮರ್ಮಮುಲನು ಶಿವಾದಿ ಷಣ್ಮತಮುಲ
ಗೂಢಮುಲನು ಮುಪ್ಪದಿ ಮುಕ್ಕೋ–
ಟಿ ಸುರಾಂತರಂಗಮುಲ ಭಾವಂಬುಲ
ನೆರಿಗಿ ಭಾವ-ರಾಗ-ಲಯಾದಿ ಸೌಖ್ಯ
ಮುಚೇ ಚಿರಾಯುವುಲು ಗಲಿಗಿ ನಿರವಧಿ ಸುಖಾತ್ಮುಲೈ
ತ್ಯಾಗರಾಜಾಪ್ತುಲೈನ ವಾ ॥ರಂ॥

10. ಪ್ರೇಮ ಮುಪ್ಪಿರಿಗೋನು ವೇಳ
ನಾಮಮು ದಲಚುವಾರು
ರಾಮಭಕ್ತುಡೈನ ತ್ಯಾಗ
ರಾಜನುತುನಿ ನಿಜದಾಸುಲೈನವಾ || ೧೦ ||

ಅರ್ಥ : ಮಹಾನುಭಾವುಲು ಎಂದರೋ–ಮಹಾನುಭಾವರು ಎಷ್ಟು ಜನರಿದ್ದಾರೆಯೋ, ಅವರೆಲ್ಲರಿಗೂ ; ವಂದನಮು–ನಮಸ್ಕಾರವು ; ಚಂದ್ರನಂತೆ ಸುಂದರವಾದ ಮುಖವುಳ್ಳವನ ; ಅಂದ ಚಂದ ಮುನು–ಅಂದಚೆಂದಗಳನ್ನು ; ಹೃದಯಾರವಿಂದಮುನ ಜೂಚಿ–ತಮ್ಮ ಹೃದಯಕಮಲಗಳಲ್ಲಿ ಕಂಡು ; ಬ್ರಹ್ಮಾನಂದಮನುಭವಿಂಚುವಾರು–ಬ್ರಹ್ಮಾನಂದವನ್ನು ಅನುಭವಿಸುವ ಮಹಾನು ಭಾವರು ; ಸಂಚಾರಮು–ತಮ್ಮೆಲ್ಲ ಚಲನವಲನಗಳನ್ನು ; ಮಾನಸ ವನಚರ–ಮಾನವ ಸಂಚಾರಿಯಾದ ಅವನಿಗೆ ; ಸಲಿಪಿ–ಸಮರ್ಪಿಸಿ ; ಬಾಗುಗ–ಚೆನ್ನಾಗಿ ; ಮೂರ್ತಿನಿ–ಅವನ ಮೂರ್ತಿಯನ್ನು; ಬೊಗಡನೇವಾರು–ಹೊಗಳುವವರು ; ಸರಗುನ–ಶೀಘ್ರವಾಗಿ ; ಪಾದಮುಲಕು ಪಾದಗಳಿಗೆ ; ಸ್ವಾಂತಮುನು ಸರೋಜಮುನು–ಆತ್ಮವೆಂಬ ತಾವರೆಯನ್ನು ; ಸಮರ್ಪಣ ಮುಜೇಯುವಾರು–ಅರ್ಪಣೆ ಮಾಡುವವರು ; ಪತಿತಪಾವನನೂ, ಪರಾತ್ಪರನೂ ಆದ ಭಗವಂತ ನನ್ನು ; ಗುರಿಂಚಿ–ಉದ್ದೇಶಿಸಿ ; ಪರಮಾರ್ಥಪಥದಲ್ಲಿ, ನಿಜಮಾರ್ಗಮುತೋನು–ಸತ್ಯವಾದ ಮಾರ್ಗದಲ್ಲಿ ; ಪಾಡುಚುನು–ಹಾಡುತ್ತಾ : ಸಲ್ಲಾಪಮುತೋ–ಸತ್ ಸಲ್ಲಾಪದಿಂದ ; ಸ್ವರಲ ಯಾದಿ ರಾಗಗಳನ್ನು ತಿಳಿಯುವವರು ; ಗಳಮುನ–ಕೊರಳಲ್ಲಿ ; ಹರಿ ಗುಣಮಣಿಮಯ ಸರ ಮುಲು–ಹರಿಯ ಗುಣಗಳೆಂಬ ರತ್ನಖಚಿತವಾದ ಸರಗಳು ; ಶೋಭಿಲ್ಲು–ಶೋಭಿಸಿರಲು ; ಇಲಲೋ–ಪ್ರಪಂಚದಲ್ಲಿ ; ಭಕ್ತಕೋಟುಲು–ಭಕ್ತರೆಲ್ಲರೂ ; ತೆಲಿವಿತೋ ಚೆಲಿಮಿತೋ–ಪರಸ್ಪರ ಅರಿವು ಸ್ನೇಹಗಳಿಂದ ಇರುವಂತೆ ;ಜಗಮೆಲ್ಲನು–ಜಗತ್ತನ್ನು ; ಕರುಣಗಲ್ಗಿ–ಕರುಣೆಯಿಂದ ; ಸುಧಾದೃಷ್ಟಿಚೇ ಬ್ರೋಚುವಾರು–ಅಮೃತೋಪಮವಾದ ದೃಷ್ಟಿಯಿಂದ ನೋಡಿ ರಕ್ಷಿಸುವವರು ; ಹೊಯಲುಮೀರ–ಪರಮ ಉಲ್ಲಾಸದಿಂದ ಕೂಡಿದ ; ನಡಲುಗಲ್ಗು ಸರಸುನಿ–ನಡೆದಾಡುವ ಸರಸನಾದ ಪರಮಾತ್ಮನನ್ನು ; ಸದಾ–ಸತತವೂ ; .ಕನುಲ ಜೂಚುಚುನು–ಕಣ್ಣಿನಿಂದ ನೋಡುತ್ತಾ ; ಪುಲಕ ಶರೀರುಲೈ–ದೇಹವೆಲ್ಲ ರೋಮಾಂಚಗೊಂಡು ; ಆನಂದ ಪಯೋಧಿ ನಿಮಗ್ನುಲೈ–ಆನಂದ ಸಾಗರದಲ್ಲಿ ಮುಳುಗಿ ; ಮುದಂಬುನನು ಯಶಮುಗಲವಾರು–ಸಂತೋಷ ದಲ್ಲಿ ಕೀರ್ತಿಯನ್ನು ಪಡೆಯುವವರು ; ಪರಮ ಭಾಗವತರು ಮುನಿಶ್ರೇಷ್ಠರು, ಚಂದ್ರ, ಸೂರ್ಯ, ಸನಕ, ಸನಂದನ, ದಿಕ್ಪಾಲಕರು, ದೇವತೆಗಳು, ಕಿಂಪುರುಷರು, ಕನಕಕಶಿಪು ಸುತ–ಹಿರಣ್ಯ ಕಶಿಪುವಿನ ಮಗ ಪ್ರಹ್ಲಾದ, ನಾರದ, ತುಂಬುರು, ಆಂಜನೇಯ, ಪರಮೇಶ್ವರ, ಶುಕಮುನಿ, ಬ್ರಹ್ಮ ಮುಂತಾದ ಪರಮಪಾವನರೂ, ಶ್ರೇಷ್ಠರೂ, ಶಾಶ್ವತರೂ, ಯಾವಾಗಲೂ ಬ್ರಹ್ಮಾನಂದ ವನ್ನು ಅನುಭವಿಸುತ್ತಿರುವವರೂ ಎಷ್ಟು ಮಂದಿ ಇದ್ದಾರೆಯೋ ಅವರಿಗೆ ವಂದನೆಗಳು. ನೀಮೆನು ನಾಮ ವೈಭವಂಬುಲನು–ನಿನ್ನ ನಾಮ ವೈಭವಗಳನ್ನು, ನಿನ್ನ ಧೈರ್ಯ ಪರಾಕ್ರಮಗಳನ್ನು, ಶಾಂತ ಮನಸ್ಕತೆಯನ್ನು, ನಿನ್ನ ವಚನ ಸತ್ಯವನ್ನು ಆನಂದಿಸುತ್ತಾ ; ರಘುವರ ! ನಿನ್ನ ಮೇಲೆ ಭಕ್ತಿಯನ್ನು ಬೆಳೆಸಿಕೊಂಡು, ದುಷ್ಟವಿಚಾರಗಳನ್ನು ಹೋಗಲಾಡಿಸಿ; ನೀ ಮದಿನೆರಿಂಗಿ–ನಿನ್ನನ್ನು ಮನಸ್ಸಿನಲ್ಲಿ ಸ್ಥಾಪಿಸಿಕೊಂಡು, ಸಂತೋಷದಿಂದ ಗುಣಭಜನಾನಂದವನ್ನು ಸವಿಯುವವರು ; ಭಾಗವತ, ರಾಮಾಯಣ, ಭಗವದ್ಗೀತೆ ಮುಂತಾದ ಶ್ರುತಿಶಾಸ್ತ್ರ ಪುರಾಣಗಳ ಮರ್ಮ ಮುಲನು–ರಹಸ್ಯಗಳನ್ನು ; ಶಿವಾದಿ ಷಣ್ಮತಮುಲ ಗೂಢಮುಲನು–ಶೈವವೇ ಮೊದಲಾದ ಆರು ಮತಗಳ ರಹಸ್ಯಗಳನ್ನು ; ಮುಪ್ಪದಿ ಮುಕ್ಕೋಟಿ–ಮೂವತ್ತುಮೂರುಕೋಟಿ ; ಸುರಾಂತರಂಗ

ಮುಲ ಭಾವಂಬುಲ–ದೇವತೆಗಳಿಗೆ ಸಹಜವಾದ ಅಂತರಂಗ ಸೌಖ್ಯವನ್ನು ; ಎರಿಗಿ–ಹೊಂದಿ ; ಭಾವ–ರಾಗ–ಲಯಾದಿ ಸೌಖ್ಯದಿಂದ ಚಿರಾಯುವನ್ನು ಪಡೆದು ಮೇರೆಯಿಲ್ಲದ ಸುಖವನ್ನು ಸವಿದು ತ್ಯಾಗರಾಜನ ಆಪ್ತರಾದವರು ; ಪ್ರೇಮವು ತೀವ್ರಗೊಂಡ ಸಮಯದಲ್ಲಿ; ನಾಮ ಮುದಲಚುವಾರು–ಭಗವಂತನ ನಾಮಸ್ಮರಣೆ ಮಾಡುವವರು ; ರಾಮಭಕ್ತುಡೈನ–ರಾಮಭಕ್ತ ನಾದ ; ತ್ಯಾಗರಾಜನುತುನಿ–ತ್ಯಾಗರಾಜನಿಂದ ನುತಿಗೊಂಡ ; ನಿಜ ದಾಸುಲೈನವಾರು–ಭಕ್ತ ರಾದ ಮಹಾನುಭಾವರು ಯಾರು ಯಾರು ಇರುವರೋ ಅವರೆಲ್ಲರಿಗೂ ವಂದನೆಗಳು.

ತಾತ್ಪರ್ಯ : ಚಂದ್ರನಂತೆ ಸುಂದರವಾದ ಮುಖವುಳ್ಳ ಪರಮಾತ್ಮನ ಅಂದಚಂದಗಳನ್ನು ನೋಡಿ ಬ್ರಹ್ಮಾನಂದ ವನ್ನೂ ಸವಿಯುವವರು ; ತಮ್ಮೆಲ್ಲ ಚಲನವಲನಗಳನ್ನು ಪರಮಾತ್ಮನಿಗೆ ಸಮರ್ಪಿಸಿ ಅವನ ದಿವ್ಯ ಸುಂದರ ಮೂರ್ತಿಯನ್ನು ಸ್ತುತಿಸುತ್ತಲೇ ಇರುವವರು ; ಅವನ ಪಾದಕಮಲಗಳಲ್ಲಿ ಆತ್ಮ ವನ್ನರ್ಪಿಸಿ, ಅವನ ಗುಣಗಳೆಂಬ ಮಣಿಹಾರಗಳನ್ನು ಕೊರಳಲ್ಲಿ ಧರಿಸಿ, ತಮ್ಮ ಅಮೃತಸಮಾನ ದೃಷ್ಟಿಯಿಂದ ಜಗತ್ತೆಲ್ಲವನ್ನೂ ಸ್ನೇಹ ಕರುಣೆಗಳಿಂದ ರಕ್ಷಿಸುವವರು ; ಪರಮಾತ್ಮನ ಉಲ್ಲಾಸಕರ ವಾದ ನಡೆಯನ್ನು ಕಣ್ಣಾರ ನೋಡಿ ಆನಂದ ಪುಲಕಿತರಾಗಿರುವ ಪ್ರಹ್ಲಾದ, ತುಂಬುರು, ಸನಕ, ಸನಂದನ, ಬ್ರಹ್ಮ, ಶಿವ ದಿಕ್ಪಾಲರಾದಿಯಾಗಿ ಸಮಸ್ತ ಸುರರ ಆನಂದವನ್ನೇ ಅನುಭವಿಸು ವವರು ; ಪರಮಾತ್ಮನ ನಾಮವೈಭವಗಳನ್ನು ಧೈರ್ಯ ಪರಾಕ್ರಮಗಳನ್ನು ನೋಡಿ ಆನಂದಿಸುತ್ತಾ, ಭಾಗವತ ರಾಮಾಯಣ ಗೀತಾದಿ ಶ್ರುತಿಶಾಸ್ತ್ರ ಪುರಾಣಗಳ ರಹಸ್ಯವನ್ನೂ ಷಣ್ಮತಗಳ ರಹಸ್ಯ ವನ್ನೂ ಅರಿತು ಮೇರೆಯಿಲ್ಲದ ಸುಖವನ್ನು ಸವಿದು ತ್ಯಾಗರಾಜನ ಆಪ್ತರಾದವರು ಎಷ್ಟುಮಂದಿ ಇದ್ದಾರೆಯೋ ಅವರೆಲ್ಲರಿಗೂ ವಂದನೆಗಳು.

4. ವರಾಳಿ. ಆದಿತಾಳ ತ್ಯಾಗರಾಜರು

ಪಲ್ಲವಿ : ಕನಕನರುಚಿರಾ ಕನಕವಸನ ! ನಿನ್ನು

ಅನುಪಲ್ಲವಿ : ದಿನದಿನಮುನ ಮನಸುನ–ಚನುವುನ ನಿನ್ನು ॥

ಚರಣ : ಪಾಲುಗಾರು ಮೋಮುನ ಶ್ರೀಯಪಾರ
ಮಹಿಮದನರು ನಿನ್ನು ॥

2. ಬಾಲಾರ್ಕಾಭ ಸುಚೇಲ ; ಮಣಿಮಯ
ಮಾಲಾಲಂಕೃತ ಕಂಧರ ! ಸರ
ಸಿಜಾಕ್ಷ ! ವರಕಪೋಲ ! ಸುರುಚಿರ ಕಿರೀಟಧರ !
ಸಂತತತಂಬು ಮನಸಾರಗ ॥

3. ಸಾಪತ್ನಿಮಾತಯೌ ಸುರುಚಿಚೇ
ಕರ್ಣಶೂಲಮೈನ ಮಾಟವೀನುಲ
ಜುರುಕ್ಕನ ತಾಳಕ ಶ್ರೀಹರಿನಿ ಧ್ಯಾನಿಂಚಿ
ಸುಖಿಂಪಗಲೇದಾ ? ಯದು ॥

4. ಮೃಗಮದಲಲಾಮ ಶುಭನಿಟಿಲವರ
ಜಟಾಯುಮೋಕ್ಷ ಫಲದ ! ಪವಮಾನ
ಸುತುಡು ನೀದು ಮಹಿಮ ದೆಲ್ಪ
ಸೀತ ದೆಲಿಸಿವಲಚಿ ಸೊಕ್ಕಲೇದಾ ಯಾರೀತಿ ನಿನ್ನು ॥

5. ಕಾಮಿಂಚಿ ಪ್ರೇಮುಮೀರ ಕರಮುಲ ನೀದು
ಪಾದ ಕಮಲಮುಲ ಬಟ್ಟುಕೊನು
ವಾಡುಸಾಕ್ಷಿ, ರಾಮನಾಮ ರಸಿಕುಡು
ಕೈಲಾಸ ಸದನುಡು ಸಾಕ್ಷಿ
ಮರಿಯು ನಾರದ ಪರಾಶರ ಶುಕ
ಶೌನಕ ಪುರಂದರ ನಗಜಾ ಧರಜ
ಮುಖ್ಯುಲು ಸಾಕ್ಷಿಗಾದ ? ಸುಂದರೇಶ !
ಸುಖ ಕಲಶಾಂಬುಧಿವಾಸಾಶ್ರಿತುಲಕೇ ॥

6. ಸುಖಾಸ್ಪದ ವಿಮುಖಾಂಬುಧರ –
ಪವನ ! ವಿದೇಹ ಮಾನಸ ವಿಹಾರಾಪ್ತ
ಸುರಭೂಜ ಮಾನಿತ ಗುಣಾಂಕ ಚಿದಾ
ನಂದ ! ಖಗತುರಂಗ ! ಧೃತ ರಥಾಂಗ !
ಪರಮದಯಾಕರ ಕರುಣಾರಸ –
ವರುಣಾಲಯ ಭಯಾಪಹಾರ ! ಶ್ರೀರಘುಪತೇ ॥

7. ಕಲಕಲಮನು ಮುಖಕಳ ಗಲಿಗಿನ ಸೀತ
ಕುಲುಕುಲುಚು ನೇರ ಕನ್ನುಲನು ಜೂಚು ನಿನ್ನು ॥

8. ಸತತಮು ಪ್ರೇಮಪೂರಿತುಡಗು ತ್ಯಾಗರಾಜ–
ನುತ ! ಮುಖಜಿತ ಕುಮುದಹಿತ ವರದ ! ನಿನ್ನು ॥

ಅರ್ಥ : ಕನಕವಸನ–ಚಿನ್ನದ ಉಡುಗೆ ಧರಿಸಿದವನೆ ; ನಿನ್ನು ಕನಕನ ರುಚಿರಾ–ನಿನ್ನನ್ನು ನೋಡನೋಡಿದಷ್ಟೂ ಕಾಂತಿ ಹೆಚ್ಚುತ್ತಿದೆ ; ದಿನದಿನಮುನ–ದಿನದಿನವೂ ; ಮನಸುನ ಚನುವುನು–ಮನಸ್ಸಿನಲ್ಲಿ ಪ್ರೀತಿಯಿಂದ ಭಾವಿಸಿದಷ್ಟೂ ; ನಿನ್ನು–ನಿನ್ನ, ಸೌಂದರ್ಯವು ವರ್ಧಿಸುತ್ತಿದೆ. ಪಾಲುಗಾರು ಮೋಮುನ–ಹಾಲಿನಂತೆ ಶುಭ್ರವಾದ ಮುಖವುಳ್ಳ ; ಶ್ರೀ ಯಪಾರ ಮಹಿಮದ–ಅಪಾರವಾದ ಸಂಪತ್ತು ಮಹಿಮೆಗಳೊಡಗೂಡಿದ ನಿನ್ನನ್ನು ನೋಡಿದಷ್ಟೂ ನಿನ್ನ ಕಾಂತಿ ಹೆಚ್ಚುತ್ತಿದೆ ಬಾಲಾರ್ಕಾಭಸುಚೇಲ–ಎಳೆಯ ಸೂರ್ಯನಂತೆ ಹೊಂಬಣ್ಣದ ದಿವ್ಯವಸ್ತ್ರಗಳನ್ನು ಧರಿಸಿದವನೆ ; ಮಣಿಮಯ ಮಾಲಾಲಂಕೃತ ಕಂಧರ–ಕೊರಳಲ್ಲಿ ರತ್ನಖಚಿತವಾದ ಹಾರಗಳನ್ನು ತೊಟ್ಟುಕೊಂಡವನೆ ; ಸರಸಿಜಾಕ್ಷ–ತಾವರೆಯಂತೆ ಕಣ್ಣುಳ್ಳವನೆ ; ವರಕಪೋಲ–ಶ್ರೇಷ್ಠವಾದ, ಸುಂದರವಾದ ಕಪೋಲಗಳನ್ನುಳ್ಳವನೆ ; ಕಾಂತಿಯುಕ್ತವಾದ ಕಿರೀಟವನ್ನು ಧರಿಸಿದವನೆ ; ಸಂತತಮು–ಸದಾ ; ಮನಸಾರಗ–ಮನಸ್ಸಿಗೆ ತೃಪ್ತಿಯುಂಟಾಗುವಂತೆ, ನೋಡುತ್ತಿದ್ದಂತೆಲ್ಲ ನಿನ್ನ ದಿವ್ಯ ಕಾಂತಿ ವರ್ಧಿಸುತ್ತಿದೆಯಯ್ಯ. ಸಾಪತ್ನಿ ಮಾತಯೌ–ಮಲತಾಯಿಯಾದ ಸುರುಚಿಯಿಂದ ; ಕರ್ಣಶೂಲಮ್ಯೈನ–ಕಿವಿಗಳಿಗೆ ಶೂಲದಂತೆ ಇರಿಯುವ ; ಮಾಟ ವಿನುಲ–ಮಾತುಗಳನ್ನು ಕೇಳಿ ; ಚುರುಕ್ಕನ ತಾಳಕ–ಚುರುಕ್ಕೆಂದು ತಾಳಲಾರದೆ ; ಶ್ರೀಹರಿನಿ ಧ್ಯಾನಿಂಚಿ–ಶ್ರೀಹರಿಯನ್ನು ಧ್ಯಾನಿಸಿ ; ಸುಖಿಂಪಗಲೇದಾ–[ಧ್ರುವನು] ಸುಖಪಡಲಿಲ್ಲವೆ ? ಮೃಗಮದಲಲಾಮ ಹಣೆಯಲ್ಲಿ ಕಸ್ತೂರೀ ತಿಲಕವನ್ನು ಧರಿಸಿದವನೆ ; ಶುಭನಿಟಿಲ–ಶುಭಕರವಾದ ಹಣೆಯುಳ್ಳವನೆ; ವರಜಟಾಯು ಮೋಕ್ಷಫಲದ-ಶ್ರೇಷ್ಠನಾದ ಜಟಾಯುವಿಗೆ ಮೋಕ್ಷವನ್ನು ಕರುಣಿಸಿದ ಶ್ರೀರಾಮನೆ ; ಪವಮಾನ ಸುತುಡು–ಆಂಜನೇಯನು ; ನೀದು ಮಹಿಮದೆಲ್ಪ–ನಿನ್ನ ಮಹಿಮೆಯನ್ನು ತಿಳಿಸಲು ; ಸೀತ–ಸೀತಾದೇವಿಯು ; ದೆಲಿಸಿ ವಲಚಿ ಸೊಕ್ಕಲೇದಾ–ಆನಂದಿಸಿ ಮೈಮರೆಯಲಿಲ್ಲವೆ ? ; ಆ

ರೀತಿ-ಅದೇ ರೀತಿಯಾಗಿ ; ಕಾಮಿಂಚಿ-ಪ್ರೇಮಿಸಿ ; ಪ್ರೇಮಮೀರ-ಅತಿಯಾದ ಪ್ರೇಮದಿಂದ ; ಕದಮುಲ ನೀದು ಪಾದಕಮುಲಮುಲಬಟ್ಟಿಕೊನುವಾಡು-ನಿನ್ನ ಪಾದಕಮಲಗಳನ್ನು ಕೈಗಳಿಂದ ಹಿಡಿದುಕೊಂಡಿರುವ ಆಂಜನೇಯನೇ ಸಾಕ್ಷಿ ; ರಾಮನಾಮ ರಸಿಕುಡು-ರಾಮನಾಮ ರಸಿಕನಾದ ; ಕೈಲಾಸ ಸೌರನುಡು-ಪರಮೇಶ್ವರನು, ಸಾಕ್ಷಿ ; ಮರಿಯು-ಅಲ್ಲದೆ ; ನಾರದ, ಪರಾಶರ ಶುಕ, ಶೌನಕ, ಪುರಂದರ, ನಗಜೌ-ಪಾರ್ವತಿ ; ಧರಜಾ-ಸೀತೆ ; ಮುಖ್ಯುಲು-ಮುಂತಾದ ಮುಖ್ಯರು ಸಾಕ್ಷಿಯಲ್ಲವೆ ? ಸುಂದರೇಶ, ಸುಖಕಲಶಾಂಬುಧಿವಾಸ, ಆಶ್ರಿತುಲುಕು-ನಿನ್ನ ಭಕ್ತರಿಗೆ ; ಸುಖಾಸ್ಪದ-ಸುಖಗಳಿಗೆ ಆಸ್ಪದನಾದವನೆ ; ವಿಮುಖಾಂಬುಧರ ಪವನ-ಶತ್ರುಗಳೆಂಬ ಮೇಘಗಳಿಗೆ ಗಾಳಿಯಂತಿರುವವನೆ ; ವಿದೇಹ ಮಾನಸ ವಿಹಾರ-ಸೀತೆಯ (ವೈದೇಹಿ) ಮನಸ್ಸಿನಲ್ಲಿ ವಿಹರಿಸುವ ಶ್ರೀರಾಮಚಂದ್ರನೆ ; ಆಪ್ತಸುರಭೂಜ-ಆಪ್ತರಾದವರಿಗೆ ಕಲ್ಪವೃಕ್ಷದಂತಿರುವವನೆ ಶ್ರೇಷ್ಠವಾದ ಗುಣಗಳುಳ್ಳವನೆ ; ಚಿದಾನಂದನೆ ; ಖಗತುರಂಗ-ಗರುಡನನ್ನು ವಾಹನವಾಗುಳ್ಳವನೆ ; ಧೃತ ರಥಾಂಗ-ಚಕ್ರವನ್ನು ಹಿಡಿದವನೆ ; ಪರಮದಯಾಕರನೆ ; ಶ್ರೀರಘುಪತಿಯೆ ; ಕಲ ಹಿಡಿದವನೆ ; ಪರಮದಯಾಕರನೆ ; ಕರುಣಾರಸ ವರುಣಾಲಯ-ಕರುಣೆಗೆ ಸಮುದ್ರನಾದವನೆ ; ಕಲಮನು ಮುಖಕಳಗಲಿಗಿನ-ಕಾಂತಿಯುಕ್ತವಾದ ನಿನ್ನ ಮುಖವನ್ನು ; ಕುಲುಕುಚುನು ಒರಕನ್ನುಲನು ಚೂಚು ನಿನ್ನು-ಓರೆಗಣ್ಣಿನಿಂದ ನೋಡುತ್ತಾ ಸೀತಾದೇವಿಯು ಆನಂದಿಸುತ್ತಿರಲು ; ಸತತಮು ನಿರಂತರವಾಗಿ ; ಪ್ರೇಮಪೂರಿತುಡಗು-ಪ್ರೇಮದಿಂದ ತುಂಬಿದ; ತ್ಯಾಗರಾಜನುತ-ತ್ಯಾಗರಾಜನಿಂದ ಸ್ತುತಿಗೊಂಡವನೆ ; ಮುಖಚಿತ ಕುಮುದ ಹಿತ-ಚಂದ್ರನನ್ನು ಮೀರಿಸಿದ ಕಾಂತಿಯಿಂದ ಕೂಡಿದ ಮುಖವುಳ್ಳವನೆ ; ವರದನಾದವನೆ, ನಿನ್ನನ್ನು ನೋಡಿ ನೋಡಿದಷ್ಟೂ ನಿನ ಕಾಂತಿ ವರ್ಧಿಸುತ್ತಿದೆಯಯ್ಯ.

5. ನಾಟ ಆದಿತಾಳ ತ್ಯಾಗರಾಜರು

ಪಲ್ಲವಿ : ಜಗದಾನಂದ ಕಾರಕ । ಜಯ ಜಾನಕೀ ಪ್ರಾಣನಾಯಕ

ಅನುಪಲ್ಲವಿ : ಗಗನಾಧಿಪ ಸತ್ಕುಲಜ ರಾಜರಾಜೇಶ್ವರ
ಸುಗುಣಾಕರ ಸುರಸೇವ್ಯ ಭವ್ಯದಾಯಕ ಸದಾ ಸಕಲ ॥

ಚರಣ : ಅಮರತಾರಕ ನಿಚಯ ಕುಮುದ ಹಿತ ಪರಿಪೂರ್ಣಾನಘಸುರಾಸುರ
ಭೂಜಗಧಿಪಯೋಧಿವಾಸ ಹರಣ ಸುಂದರ ಕರವದನ ಸುಧಾಮಯ ವಚೋ
ಬೃಂದ ಗೋವಿಂದ ಸಾನಂದ ಭೂವರಾಜರಾಪ್ತ ಶುಭಕರಾನೇಕ ॥

2. ನಿಗಮ ನೀರಜಾಮೃತಜ ಪೋಷಕ ನಿಮಿಷ ವೈರಿವಾರಿದ ಸಮೀರಣ
ಖಗ ತುರಂಗ ಸತ್ಕವಿ ಹೃದಾಲಯಾಗಣಿತ ವಾನರಾಧಿಪ ನತಾಂಘ್ರಿಯುಗ ॥

3. ಇಂದ್ರನೀಲಮಣಿ ಸನ್ನಿಭಾಪಘನಚಂದ್ರ ಸೂರ್ಯನಯನಾಪ್ರಮೇಯ ವಾ
ಗೀಂದ್ರ ಜನಕ ಸಕಲೇಶ ಶುಭ್ರನಾಗೇಂದ್ರಶಯನ ಶಮನ ವೈರಿ ಸನ್ನುತ ॥

4. ಕರಧೃತ ಶರಜಾಲ ಸುರಮದಾಪಹರಣಾವನೀ ಸುರಾಸುರಾವನ
ಕವೀನ ಬಿಲಜಮೌನಿ ಕೃತ ಚರಿತ್ರ ಸನ್ನುತ ಶ್ರೀ ತ್ಯಾಗರಾಜನುತ ॥

5. ಸೃಷ್ಟಿಸ್ಥಿತ್ಯಂತಕಾರಕಾಮಿತ ಕಾಮಿತ ಫಲದಾಸಮಾನ ಗಾತ್ರ ಶ
ಚೀ ಪತಿ ನುತಾಬ್ಧಿ ಮದಹರಾನುರಾಗ ರಗರಾಜಿತ ಕಥಾಸಾರ ಹಿತ ॥

6. ಪಾದವಿಜಿತ ಮೌನಿ ಶಾಪಶಮ ಪರಿಪಾಲ ವರಮಂತ್ರಗ್ರಹಣಲೋಲ
ಪರಮಶಾಂತಚಿತ್ತ ಜನಕಜಾಧಿಪ ಸರೋಜಭವ ವರದಾಖಿಲ
7. ಪುರಾಣಪುರುಷ ನೃವರಾತ್ಮಜಾಶ್ರಿತ ಪರಾಧೀನ ಕರ ವಿರಾಧ ರಾವಣ
ವಿರಾವಣಾನಘ ಪರಾಶರ ಮನೋಹರಾವಿಕೃತ ತ್ಯಾಗರಾಜ ಸನ್ನುತ ||
8. ಸಜ್ಜನ ಮಾನಸಾಬ್ಧಿ ಸುಧಾಕರ ಕುಸುಮ ವಿಮಾನ ಸುರಸಾರಿಪುಕರಾಬ್ಜ
ಲಾಲಿತ ಚರಣಾ ವಗುಣಾ ಸುರಗುಣಾ ಮದಹರಣಾ ಸನಾತನಾಜನುತ ||
9. ಓಂಕಾರ ಪಂಜರ ಕೀರ ಪುರಹರ ಸರೋಜಭವ ಕೇಶವಾದಿ ರೂ
ಪ ವಾಸವರಿಪು ಜನಕಾಂತಕ ಕಲಾಧರ ಕಲಾಧರಾಪ್ತ ಘೃಣಕರ ಶ
ರಣಾಗತ ಜನ ಪಾಲನ ಸುಮನೋರಮಣ ನಿರ್ವಿಕಾರ ನಿಗಮಸಾರತರ ||
10. ಅಗಣಿತಗುಣ ಕನಕಚೇಲ ಸಾಲವಿದಳನಾರುಣಾಭ ಸಮಾನ ಚರಣಾ
ಪಾರ ಮಹಿಮಾದ್ಭುತ ಸುಕವಿ ಜನ ಹೃತ್ಸದನ ಸುರಮುನಿಗಣ ವಿಹಿತ ಕಲ
ಶ ನೀರನಿಧಿಜಾರಮಣ ಪಾಪಗಜ ನೃಸಿಂಹ ವರ ತ್ಯಾಗರಾಜಾಧಿನುತ

ಅರ್ಥ : ಜಗದಾನಂದಕಾರಕ–ಜಗತ್ತಿಗೆ ಆನಂದವನ್ನು ಉಂಟುಮಾಡುವವನೆ ; ಜಾನಕೀ ಪ್ರಾಣ ನಾಯಕನೆ, ನಿನಗೆ ಜಯವಾಗಲಿ. ಗಗನಾಧಿಪ–ಸೂರ್ಯನ ; ಸತ್ಕುಲಜ–ಶ್ರೇಷ್ಠವಂಶದಲ್ಲಿ ಜನಿಸಿದ ; ರಾಜರಾಜೇಶ್ವರನೆ, ಸುಗುಣಗಳಿಗೆ ಆಕರನಾದವನೆ : ಸುರಸೇವ್ಯ–ದೇವತೆಗಳಿಂದ ಸೇವಿತನಾದವನೆ ; ಭವ್ಯದಾಯಕ ಸಕಲ–ಸಕಲರಿಗೂ ಶುಭಕರನೆ ; ಅಮರ–ದೇವತೆಗಳೆಂಬ ; ತಾರಕನಿಚಯ–ನಕ್ಷತ್ರಗಳ ಸಮೂಹಕ್ಕೆ ; ಕುಮುದಹಿತ–ಚಂದ್ರನಂತಿರುವವನೆ ; ಪರಿ ಪೂರ್ಣನೆ, ಅನಘನೆ, ಸುರ ಸುರಭೂಜ–ದೇವತೆಗಳಿಗೆ ಕಲ್ಪವೃಕ್ಷದಂತಿರುವವನೆ ; ಪಯೋಧಿ ವಾಸ–ಕ್ಷೀರಸಾಗರದಲ್ಲಿ ನೆಲಸಿರುವವನೆ ; ಸುಂದರವಾದ ಮುಖವುಳ್ಳವನೆ ; ಸುಧಾಮಯ ವಚೋಬೃಂದ–ಅಮೃತಕ್ಕೆ ಸಮಾನನಾದ ಮಾತುಗಳುಳ್ಳವನೆ ; ಗೋವಿಂದನೆ, ಭೂವರಾ ಅಜರಾಪ್ತ–ದೇವತೆಗಳಿಗೆ ಆಪ್ತನೆ ; ಅನೇಕ ಶುಭಗಳನ್ನು ಉಂಟುಮಾಡುವವನೆ ; ಅನಿಮಿಷ ವೈರಿ ವಾರಿದ ಸಮೀರಣ-ದೇವತೆಗಳ ಶತ್ರುಗಳಾದ ರಾಕ್ಷಸರೆಂಬ ಮೋಡಗಳನ್ನು ಹಾರಿಸುವ ವಾಯುವಿನಂತಿರುವವನೆ ; ಖಗತುರಂಗ–ಗರುಡವಾಹನನೆ ; ಸತ್ಕವಿಹೃದಾಲಯ–ಶ್ರೇಷ್ಠನಾದ ಕವಿಯ [ವಾಲ್ಮೀಕಿಯ ?] ಹೃದಯದಲ್ಲಿ ನೆಲಸಿದವನೆ ; ಅಗಣಿತವಾನರಾಧಿಪ ನತಾಂಘ್ರಿ ಯುಗ–ಅಸಂಖ್ಯಾತ ವಾನರರ ಅಧಿಪತಿಯಾದ ಸುಗ್ರೀವನಿಂದ ನಮಸ್ಕಾರಗೊಂಡ ಪಾದ ಗಳುಳ್ಳವನೆ ; ಇಂದ್ರನೀಲ ಮಣಿ ಸನ್ನಿಭ–ಇಂದ್ರನೀಲರತ್ನವನ್ನು ಹೋಲುವ ; ಚಂದ್ರ ಸೂರ್ಯ ನಯನ-ಚಂದ್ರಸೂರ್ಯರನ್ನೇ ಕಣ್ಣುಗಳಾಗಿ ಉಳ್ಳವನೆ ; ಅಪ್ರಮೇಯನೆ ; ವಾಗೀಂದ್ರ ಜನಕ–ಬ್ರಹ್ಮನ ತಂದೆಯೆ; ಸಕಲೇಶ–ಸಕಲಕ್ಕೂ ಒಡೆಯನೆ ; ಶುಭ್ರನಾಗೇಂದ್ರಶಯನ-ಸರ್ಪಶಯನನೆ; ಕರಧೃತ ಶರಜಾಲ ಕೈಯಲ್ಲಿ ಬಾಣಗಳನ್ನು ಹಿಡಿದವನೆ ; ಅಸುರಮದಾಪಹರಣ-ರಾಕ್ಷಸರ ಮದ ವನ್ನು ನಾಶಮಾಡಿದವನೆ; ಅವನೀಸುರಾಸುರಾವನ–ಬ್ರಾಹ್ಮಣರು ದೇವತೆಗಳನ್ನು ರಕ್ಷಿಸುವವನೆ ; ಕವೀನ ಬಿಲಜಮೌನಿಕೃತ ಚರಿತ್ರ–ಹುತ್ತದಲ್ಲಡಗಿದ ಮುನಿ ವಾಲ್ಮೀಕಿಯಿಂದ ಕಥಿತವಾದ ಚರಿತ್ರೆಯುಳ್ಳವನೆ ; ಸನ್ನುತನೆ, ತ್ಯಾಗರಾಜನುತನೆ ; ಸೃಷ್ಟಿಸ್ಥಿತಿ ಅಂತ್ಯಕಾರಕನೆ ; ಕಾಮಿತ ಫಲಗಳನ್ನು ಅಮಿತವಾಗಿ ನೀಡುವವನೆ ; ಅಸಮಾನ ಗಾತ್ರ-ಹೋಲಿಕೆಯೇ ಇಲ್ಲದ ದಿವ್ಯ ದೇಹವುಳ್ಳವನೆ ; ಶಚೀಪತಿನುತ-ದೇವೇಂದ್ರನಿಂದ ಪ್ರಾರ್ಥಿತನಾದವನೆ ; ಅಬ್ಧಿ ಮದಹರ-ಸಾಗರನ ಮದವನ್ನು ನಾಶಮಾಡಿದವನೆ ; ಅನುರಾಗ ರಂಜಿತ ಕಥಾಸಾರಹಿತ-ಪ್ರೀತಿಯಿಂದ ರಂಜಿತ

ವಾದ ಕಥೆಯುಳ್ಳವನೆ ; ಮೌನಿಶಾಪ-ಗೌತಮಮುನಿಯು ಅಹಲ್ಯೆಗೆ ಕೊಟ್ಟಿದ್ದ ಶಾಪವನ್ನು ; ಪಾದ ವಿಜಿತ ಶಮ-ಪಾದಸ್ಪರ್ಶನಿಂದಲೇ ಗೆದ್ದು ಶಮನಗೊಳಿಸಿ, ಪಾಲಿಸಿದವನೆ ; ವರಮಂತ್ರ ಗ್ರಹಣಲೋಲ-ವಿಶ್ವಾಮಿತ್ರನಿಂದ ಶ್ರೇಷ್ಠವಾದ ಮಂತ್ರವನ್ನು ಪರಿಗ್ರಹಿಸಿದವನೆ ; ಪರಮಶಾಂತ ಚಿತ್ತನೆ; ಜನಕಜಾಧಿಪ-ಜನಕಪುತ್ರಿ ಸೀತೆಯ ಪತಿಯೆ ; ಸರೋಜಭವ ವರದಾಖಿಲ-ಬ್ರಹ್ಮನೇ ಮೊದಲಾದ ಎಲ್ಲರಿಗೂ ವರದನಾದವನೆ ; ಪುರಾಣಪುರುಷನೆ, ನೃವರಾತ್ಮಜ-ರಾಜಶ್ರೇಷ್ಠ ದಶರಥನ ಪುತ್ರನೆ ; ಆಶ್ರಿತಪರಾಧೀನ-ಭಕ್ತರಿಗೆ ಅಧೀನನಾಗಿರುವವನೆ ; ವಿರಾಧ, ರಾವಣ, ಮೊದಲಾದವರನ್ನು ; ವಿರಾವಣ-ಕೊಂದವನೆ ; ಅನಘನೆ, ಪರಾಶರರಿಗೆ ಮನೋಹರನಾದವನೆ ; ಅವಿಕೃತ-ನಿರ್ಮಲನಾದ; ತ್ಯಾಗರಾಜಸನ್ನುತನೆ, ಸಜ್ಜನಮಾನಸಾಬ್ಧಿ ಸುಧಾಕರ-ಸಜ್ಜನರ ಮನಸ್ಸೆಂಬ ಸಾಗರಕ್ಕೆ ಚಂದ್ರನಂತಿರುವವನೆ ; ಸುರಸಾರಿಪು-ಸುರಸೆಗೆ ಶತ್ರುವಾಗಿ ಪರಿಣಮಿಸಿದ ಆಂಜನೇಯನಿಂದ ; ಲಾಲಿತಚರಣ-ಸೇವಿಸಲ್ಪಟ್ಟ ಪಾದಗಳುಳ್ಳವನೆ ; ಅವಗುಣಗಳಿಂದ ಕೂಡಿದ ಅಸುರಗಣಗಳ ಮದವನ್ನು ನಾಶಮಾಡಿದವನೆ ; ಸನಾತನನೆ, ಅಜನುತ-ಬ್ರಹ್ಮನಿಂದ ನುತಿಗೊಂಡವನೆ ; ಓಂಕಾರ ಪಂಜರ ಕೀರ-ಓಂಕಾರವೆಂಬ ಪಂಜರದಲ್ಲಿ ಗಿಣಿಯಂತಿರುವವನೆ ; ಪುರಹರ-ತ್ರಿಪುರಗಳನ್ನು ನಾಶಮಾಡಿದ ಪರಮೇಶ್ವರ, ಸರೋಜಭವ-ಬ್ರಹ್ಮ, ಕೇಶವಾದಿ ರೂಪ-ಕೇಶವನೇ ಮೊದಲಾದ ರೂಪು ಪಡೆದವನೆ ; ವಾಸವರಿಪುಜನಕಾಂತಕ-ಇಂದ್ರನ ಶತ್ರುವಾದ ಇಂದ್ರಜಿತುವಿನ ತಂದೆ ರಾವಣನನ್ನು ಸಂಹರಿಸಿದವನೆ ; ಕಲಾಧರ-ಸಕಲಕಲೆಗಳನ್ನೂ ಉಳ್ಳವನೆ ; ಕಲಾಧರಾಪ್ತ ಘೃಣಕರ-ಚಂದ್ರನನ್ನು ಧರಿಸಿದ ಪರಮೇಶ್ವರನ ಮಿತ್ರನಾದವನೆ ; ಶರಣಾಗತ ಜನರನ್ನು ಪಾಲಿಸುವವನೆ ; ನಿರ್ವಿಕಾರನೆ, ನಿಗಮಸಾರತರ-ಸಾರತರವಾದ ವೇದ ಸ್ವರೂಪನೆ ; ಅಗಣಿತ ಗುಣನೆ, ಕನಕಚೇಲ-ಚಿನ್ನದ ಉಡುಗೆ ಧರಿಸಿದವನೆ ; ಸಾಲ ವಿದಳನ-ಸಾಲವೃಕ್ಷಗಳನ್ನು ಭೇದಿಸಿದವನೆ ; ಅರುಣಾಭ ಸಮಾನ ಚರಣ-ಅರುಣ ಕಾಂತಿಯಂತೆ ಕೆಂಪಗಿನ ಪಾದಗಳುಳ್ಳವನೆ ; ಅಪಾರ ಮಹಿಮೆಯುಳ್ಳವನೆ ; ಶ್ರೇಷ್ಠ ಕವಿಜನರ ಹೃದಯದಲ್ಲಿ ಮನೆಮಾಡಿದವನೆ : ಸುರಮುನಿಗಣಗಳಿಗೆ ಹಿತನಾದವನೆ ; ಕಲಶನೀರನಿಧಿರಮಣ-ಕ್ಷೀರಸಾಗರ ತನಯೆ ಆದ ಲಕ್ಷ್ಮಿಯ ರಮಣನೆ ; ಪಾಪಗಜನೃಸಿಂಹ-ಪಾಪಗಳೆಂಬ ಆನೆಗೆ ಸಿಂಹನಾದವನೆ ; ತ್ಯಾಗರಾಜನಿಂದ ನುತನಾದವನೆ.

## ೭. ರಾಗಮಾಲಿಕೆಗಳು

1. ರೂಪಕತಾಳ | ಸುಬ್ಬರಾಮದೀಕ್ಷಿತರು

(೧) **ಕಲ್ಯಾಣಿ** : ಗಾರವಮುಗನ್ನ ದೊರೆಯನಿ ಕಲ್ಯಾಣಿ ಪಲಚಿಯುನ್ನದಿರಾ ||
ಸ್ವರ ಸಾಹಿತ್ಯ :
ಕಾಮಾರಿನುತ ಗುರುಗುಹ ಕುಮಾರಾ ನಿನು ದಲಚಿ ||
ಘನಂಬುಗಮುನಂಬುನ ದಿನಂಬುನು ನುತಿಂಪುಚು ಸೊಲುಪುನ ||
ಕಲ್ಯಾಣಿ ವಲಚಿಯುನ್ನದಿರಾ ||

(೨) **ತೋಡಿ** : ಮೇರುದಲಂಚ ಕೂಡದುರಾ ವೇಗ ತೋಡಿ ತೆಮ್ಮನೆರಾ ||
ಸ್ವರ ಸಾಹಿತ್ಯ : ರಾ ರಾ ಚೆಲಿನಲಚುಟ ಮೇರಾ ಕಲಗೆನುರಾ
ವಾರಿಜಾಕ್ಷಿಯಿಕ ನಿಮಿಷಮು ಜೂಡಕುಂಡದುರಾ ತಮಿನಿ
ವೇಗ ತೋಡಿ ತೆಮ್ಮನೆರಾ ||

(೩) **ಸಾವೇರಿ** : ಸಾರೆಕುಸರ ಸಾವೇರಿದಿ ಶಾನ ವೇಡುಕೊನ್ನದಿರಾ ||
ಸ್ವರ ಸಾಹಿತ್ಯ : ತಲಪುನ ವಲಪು ನಿಲುಪು ಲೇಕಕಲಿಸದಾ ಅಲಿಕಿ
ಚೆಲುಲನು ಕಲಯಗನಿ ಪಿಲಿಚಿ ಚೆಲುವು ಮೀರ ಪಿಲುವುಮುನುಚು
ಶಾನ ವೇಡುಕೊನ್ನದಿರಾ ||

(೪) **ಅಠಾಣ** : ಮಾರುಡು ಬಹುಠಾಣ ಕುಸುಮ ಬಾಣಮೇಯ ಸೊಲಸೇರಾ ||
ಸ್ವರ ಸಾಹಿತ್ಯ : ಶೀತಾಂಶು ಕಿರಣಮು ಶಿಖಿಯೈ ಮೀರನಳಿ ಪಿಕಶುಕ
ನಿನಾದಮುಲು ವೀನುಲಕುನು ಚಾಲ ಶೂಲಮುಗ ವೆಲಯುಗ ||
ಬಾಣಮೇಯ ಸೊಲಸೇರಾ ||

(೫) **ನೀಲಾಂಬರಿ** : ನೀರಜಗಂಧಿ ಕಾಕಚೇ ನೀಲಾಂಬರಿಯೈನದಿರಾ ||
ಸ್ವರ ಸಾಹಿತ್ಯ : ನೀ ಪಾದಮುಲೆ ಗತಿಯನಿ ಪಲ್ಮಾರು ಬಲ್ಕೆನುರಾ ||
ಸರೋಜ ಕಿಸಲಯ ಶಯನಮುನ ಬೊರಲ ಪಿರಾಳಿನಿ ಜೆದರಿ ||
ನೀಲಾಂಬರಿಯೈನದಿರಾ ||

(೬) **ಮಣಿರಂಗು** : ಮಾ ರಾಮ ಮಣಿರಂಗುನಿ ಮದಿನೆಂಚಿ ಪೂಜಿಂಚೆನುರಾ ||
ಸ್ವರ ಸಾಹಿತ್ಯ : ವಂದಾರು ಜನ ಶುಭಕರ ಮಂದಾರ ಪರಮಪುರುಷ
ವರದಾಯಕ ಮಧುಹರ ಶರಣಾಗತ ಜನ ಭಯಹರಯನಿ ||
ಮದಿನೆಂಚಿ ಪೂಜಿಂಚೆನುರಾ ||

(೭) **ಕಾಂಬೋಧಿ** : ವಾರಕು ಸುಖಾಂಬೋಧಿ ವನಿತಗೂಡಿ ತೆಲುಪುಮುರಾ ||
ಸ್ವರಸಾಹಿತ್ಯ : ನೀ ದಾನ ನನಿ ನೆನರುನ ಮನ್ನಿಂಚು ಮಾ ಶ್ರಮಯನ
ಪರಾಕು ಸೇಯಕ ದುರುಸುಗಾ ನಿರತಂಬುನ ಸತತಂಬುನ
ವನಿತಗೂಡಿ ತೆಲುಪುಮುರಾ ||

(೮) **ಮುಖಾರಿ** : ನೀರದಶಮುಖಾರಿ ಸೇತು ಭುವಿ ಭಾಸ್ಕರ ಮಹಿಪಾಲಾ ॥
ಸ್ವರಸಾಹಿತ್ಯ : ಸಕಲ ಸುರಾಸುರ ಸೇವಿತ ಶ್ರೀರಾಜರಾಜೇಶ್ವರಿ
ಕರುಣಾಕಟಾಕ್ಷಲಬ್ಧ ಸಕಲ ಭಾಗ್ಯ ಧುರಂಧುರುಡಗು
ಭುವಿಭಾಸ್ಕರಮಹಿಪಾಲಾ ॥

(೯) **ಮೋಹನ** : ಧೀರುನೇಲು ಶ್ರೀಃ ಷಣ್ಮುಖದೇವ ದಿವ್ಯ ಮೋಹನ ಶಿಖಿವಾಹನ ॥
ಸ್ವರ ಸಾಹಿತ್ಯ : ಕಾರುಣ್ಯಾಮೃತ ಜಲಧಿಗಾಮಾಕಾ
ವರ ಸುರ ಸದಯ ॥

**ಮೋಹನ** : ನಿರುಪಮ ಗುಣನಿಧಿಯದಿರಾ ; **ಮುಖಾರಿ** : ನೆಲತ ಪೊಗಮು ನೆಲಯಗುರಾ ;
**ಕಾಂಬೋಧಿ** : ಕುರುಲನು ಪೊಗಲಂದುದುರು ; **ಮಣಿರಂಗು** : ಕುಂಭ ಕುಚಮುಲು ಗಲದಿರಾ ;
**ನೀಲಾಂಬರಿ** : ಸರಸ ಕಳಾನಿಧಿಯದಿರಾ ; **ಅಠಾಣ** : ಸನ್ನುತಾಂಗಿ ನೆಂಚಕುರಾ ;
**ಸಾವೇರಿ** : ಸರಸಗತ ಮಿದಾಚಕುರಾ ; **ತೋಡಿ** : ವರುಡನಿಗ್ಗೈಕೊನಿನದಿರಾ ;
**ಕಲ್ಯಾಣಿ** : ತರುಣಿನೇಲನಿದಿತದಿರಾ ॥ ಗಾರವಮು ॥

2. ರೂಪಕತಾಳ — ಸ್ವಾತಿ ತಿರುನಾಳ್

(೧) **ಶಂಕರಾಭರಣ** :
ಪನ್ನಗೇಂದ್ರ ಶಯನ ಶ್ರೀ ಪದ್ಮನಾಭ ಮುದಾ ಕಾಮ
ಸನ್ನಮಾನಸಾಂ ಮಾಮವ ಸಾರಸಾಯತ ಲೋಚನಾ ॥

(೨) **ಕಾಂಭೋಜಿ** :
ಮಂದ ಮಾರುತೋಪಿ ಮಮ ಮಾನಸಂ ವಿವಶಯತಿ
ಕುಂದ ಕುಟ್ಮಳ ರದನ ಕೋಪ ಮಾಷು ಜಹಿ ಮಯಿ ॥

(೩) **ನೀಲಾಂಬರಿ** :
ಕೋಕಿಲಾ ಶುಕಾದಿ ಮಂಜು ಕೂಜಿತಮಪಿ ಮೇ ಹಂತ
ಪಾಕ ಶಾಸನಾ ವಿನುತ ಭಾತಿ ಘೋರ ತಮ ಮಯೇ ॥

(೪) **ಭೈರವಿ** :
ಮಾನಿನೀ ಜನ ಹಸಿತಾಂ ಮಾಕುರು ಮಾಮನನ್ಯೇಷಾಂ
ಸೂನ ಸಾಯಕ ಸದೃಶಾಂ ಶೋಭನಾಂಗ ದಯಾಪರ ॥

(೫) **ತೋಡಿ** :
ಯಾಮಿನೀ ಸಂವೇಶೇಷುತ್ವಾಂ ಕಾಮಮವಲೋಕಯಾಮಿ
ಕೋಮಳಾಂಗ ವಿಗಳಿತ ಘೋರ ತಾಪ ಕ್ಷಣಂ ತದಾನೀಂ ॥

(೬) **ಸುರುಟಿ** :
ಪಾಟಲ ಬಿಂಬ ಸದೃಶ ಪಾವನ ವಿಮಲಾಧರ
ಹಾಟಕೋಪಮ ವಸನ ಹಾರ ಶೋಭಿತ ಕಂಧರ ॥

(೭) **ನಾದನಾಮಕ್ರಿಯಾ** :
ದೇವದೇವ ಕೃಪಯಾಮೇ ದೇಹಿ ಬಾಹು ನಿಪೀಡನಂ
ಭಾವಯಾಮಿ ಭವದೀಯಾಪಾಂಗ ಲೀಲಾಂ ರಮಾವರ ॥

(೮) **ಭೂಪಾಳ** : ಮೋದಯಾಮಿ ಜಗದೀಶ ಮೋಹನ ಕಾಮ ಕೇಳೀಶು
ಸಾದರ ಮರ್ಥಯೇ ನಾಥ ಸಾಮಜ ವರಗಮನ ||

ಗರ್ಭಪುರಿವಾಸರು

3. ರೂಪಕತಾಳ

(೧) **ಕಲ್ಯಾಣಿ** : ಅಂಬಾ ನಿನ್ನು ನೆರ ನಮ್ಮಿತಿ ಆಲೋಚನೆಂದುಕೇ ನನ್ನಾದರಿಂಪ ಸಮಯಮಮ್ಮ ||
ಕಂಬುಗಳನಿ ಕಲ್ಯಾಣಿ ಕದಂಬ ವನವಾಸಿನಿ ||

(೨) **ಗೌಳಿಪಂತು** : ನೀರಜದಳ ನಯನೇ ನಿನ್ನು ನಮ್ಮಿನವಾಡನಿ
ನಿರತಮುಗಾ ರಕ್ಷಿಂಚು ನೆರ ದಾತ ನೀವೇಗಾನಿ ||

(೩) **ನಾಟಕುರಂಜಿ** : ನೀದು ಮಹಿಮ ಪೊಗಡುಟಕು ನಾದು ತರ ಮೇವಾರಿ ತರಮಾ
ಆದಿಶೇಷುನಿಕೈನ ತರಮಾ ನಾದ ಸ್ವರೂಪಿಣಿ ತಲ್ಲಿ ||

(೪) **ಚಕ್ರವಾಕ** : ಸಾಧು ಜೇಲನಿ ಚಿತ್ತರಂಜನಿ ಶ್ರೀ ಹರಿವರ ಸೋದರಿ ಅಂಬ
ಆದಿ ಪರಾಶಕ್ತಿ ದೇವಿ ನಾದು ಕೋರಿಕಲಿಚ್ಚಿ ತಲ್ಲಿ ||

(೫) **ನೀಲಾಂಬರಿ** : ವರ ಗರ್ಭ ಪುರಮುನಂದು ವರಮುಲಿಚ್ಚು ದಾನನುಚು
ಬಿರುದುಗಲ ಭಾರತಿ ಪದ ಶರಣಂಟಿನಿ ಸೌಂದರ ನಾಯಕಿ ||

ಸ್ವಾತಿ ತಿರುನಾಳ್

4. ಆದಿತಾಳ

(೧) **ಕಮಲಾಮನೋಹರಿ** :
ಸಾನಂತಂ ಕಮಲಾಮನೋಹರೀ ತವಂ ಶ್ರೀಜಾತ ನಾದಾಯಿತಂ ||

(೨) **ಹಂಸಧ್ವನಿ** :
ತ್ವಂ ಹಂಸಧ್ವನಿ ಜಯಿತ್ರಗಂ ಸಕಲ ಸತ್ಪಾದಾರವಿಂದೋಜ್ವಲಂ ||

(೩) **ರೇವಗುಪ್ತಿ** :
ಕುರ್ವಾಣಂ ಮುಹುರೇವ ಗುಪ್ತಿಂ ಅಸುರ ಪ್ರದ್ವೇಷಣಾಮಹ ವೇ ||

(೪) **ತರಂಗಿಣಿ** :
ದೇವಂ ಕ್ಷೀರ ತರಂಗಿಣೀಶ ಶಯನಂ ಶ್ರೀಪದ್ಮನಾಭಂ ಭಜೇ ||

ಸ್ವಾತಿ ತಿರುನಾಳ್

5. ರೂಪಕತಾಳ

(೧) **ಕಲ್ಯಾಣಿ** :
ಕಲ್ಯಾಣೀ ಕಲಯತಿ ಕದಾ ತ್ರಿಜಗತಾಂ ಪಾಪೌಘವಿಧ್ವಂಸಿನೀಂ ||

(೨ **ಮೋಹನ** :
ಯಲ್ಲಾವಣ್ಯಮ್ರಶೇಷ ಕೋಪ ಕಮನೀಯ ನೇತ್ರೈಕ ಸಂ ಮೋಹನಂ ||

(೩) **ಸಾರಂಗ** :
ಸಾರಂಗಂ ಪದ ನಕ್ರ ಭೀತ ಮಹಿತಂ ಯೋ ಪಾಲಯತ್ ಸ ತ್ವರಂ ||

(೪) **ಶಂಕರಾಭರಣ** :
ಬಾಹುರ್ಯಸ್ಯ ಶಂಕರಾಭರಣ ಜಿತ್ಪಾತು ಸನ ಕೇಶವ ||

6. ಆದಿತಾಳ

(೧) **ಮೋಹನ** : ಕಮಲಜಾಸ್ಯ ಹೃತ ನಿಗಮರಾಶಿ ಹಯಗ್ರೀವ
ದಮನ ಮೀನ ಶರೀರ ಮಾಮವೋದ್ಧಾರ ||

(೨) **ಬಿಲಹರಿ** : ಧೃತ ಮಂದರ ಭೂಧರ ದಿವ್ಯಕೂರ್ಮರೂಪ
ಪೀತ ಸುಧಾ ಮೋದಿತ ವಿಬುಧಜಾತ ||

(3) **ಧನ್ಯಾಸಿ** : ಘೋರ ಹಿರಣ್ಯಾಕ್ಷಾದಾರಣ ಸೂಕರಾ
ಕಾರ ವಸುಧಾಧಾರ ಜಗದಾಧಾರ ||

(4) **ಸಾರಂಗ** : ಪ್ರಹ್ಲಾದಾವನೋಪಾತ್ತ ಪ್ರತಿಭಯ ನೃಹರೇ
ಪ್ರಹ್ಲಾದಿತ ಸಜ್ಜನ ದೈತ್ಯ ನಿಧನ ||

(5) **ಮಧ್ಯಮಾವತಿ** : ಕಲಿತವಾಮನರೂಪ ಖಂಡಿತೋದಧ ಮಹಾ
ಬಲಿ ಗರ್ವಜಾಲ ಸುಗುಣ ಪಾಲ ||

(6) **ಅಠಾಣ** : ಶಿತಧಾರ ಕುಠಾರ ರಂಜಿತ ಬಾಹೋ ಹರಾ
ಧೀತಾಮಿತ ಶಾಸ್ತ್ರ ರಿಪುಭೀಮ ಭಾರ್ಗವ ರಾಮ ||

(7) **ನಾಟಕುರಂಜಿ** : ಮನುಕುಲ ತಿಲಕ ವಂಚನ ಪರ ದಶಕಂಠ
ಘನವಾತ ರಘುವೀರ ಶಂಕರ ಧೀರ ||

(8) **ದರ್ಬಾರ್** : ಕ್ಷೀರ ಸಮಾಕೃಷ್ಟಸಾರ ಹಸ್ತಿನಾಪುರ
ಘೋರ ಪ್ರಲಂಬ ಹರ ಬಲದೇವ ಶೂರ ||

(9) **ಆನಂದಭೈರವಿ** : ನಂದನೀಯ ತಮ ಬೃಂದಾವನ ರಚಿತ
ಕುಂದಸಾಯಕ ಲೀಲ ಬಾಲಗೋಪಾಲ ||

(10) **ಸೌರಾಷ್ಟ್ರ** : ಕಲಿಯುಗಾಂತ ಭಾವಿ ಕಲ್ಕಿರೂಪ ಸಜಲ
ಜಲದಾಭ ನಿಜಶೋಭ ಪಂಕಜನಾಭ ||

# ೮. ಕ್ಷೇತ್ರಯ್ಯ ಪದಗಳು

1. ಪುನ್ನಾಗವರಾಳಿ ತ್ರಿಪುಟತಾಳ

ಪಲ್ಲವಿ : ನಿನ್ನು ಜೂಡ ಗಲಿಗೇ ನೇ ನಿನ್ನಾಳ್ಳಕು

ಅನುಪಲ್ಲವಿ : ನಿನ್ನು ಜೂಚಿ ನಾಲುಗ್ಗೈದು ನೆಲಲಾಯೆ ಮುವ್ವಗೋಪಾಲ ||

ಚರಣ : ನಿನ್ನ ರೇಯಿ ಕಲಲೊ ನಾ ಕನುಲಗಟ್ಟಿನಟ್ಲುಂಡ
ವೆನ್ನುಡಾ ದಿಗ್ಗುನ ಲೇಚಿ ವೆದಕಿ ಕಾನಕ
ಕನ್ನೀರುಚಿ ಪೈಟ ತಡಿಸಿ ಕರಿಗಿ ಚಿಂತನೊಂದಿತಿ
ನನ್ನು ಕಲಚಿತಿವೊ ಲೇದೊ ನಾ ನೋಮು ಫಲಮು ||

2. ವಿಡೆಮನಿಯನ್ನಮನಿ ವೇಡುಕನಿ ನಿದುರ ಯನಿ
ಯೆಡಬಾಸಿನದಿ ವೊದ ಲೇಮಿಯು ಲೇದುಗಾ
ಯಡವಿಲೊ ಜ್ರೊದ್ದುಗೊಕ ಯಂಥಕಾರವ್ಮೈನ ವಾನಲೊ
ತಡಸಿ ದೋವಗಾನನಿ–ದಾನಿವಲೆಯುನ್ನ ತನಕು ||

5. ಕನ್ನ ವಾ ರಾಡುಕೊನೇದಿ ಕನ್ನೆಲು ನವ್ವು ಕೊನೇದಿ
ವಿನ್ನಾವೊ ವಿನಲೇದೊ । ವಿನರಾ ಯೀವಿಂತ
ನಿನ್ನು ಗೂಡಿನದೇ ವೊದಲು ನೀತೋಡಿದೇ ಲೋಕವ್ಮೈ
ಯುನ್ನಾ ನಿಂತೇ ವೇರೇಮನಸ್ಸೈ ಯುಂಟನಾ ಮುವ್ವಗೋಪಾಲ ||

ಅರ್ಥ : ಇನ್ನಾಳ್ಳಕು–ಇಷ್ಟು ದಿನಗಳಿಗೆ ; ನಿನ್ನು ಜೂಡಗಲಿಗೇ–ನಿನ್ನನ್ನು ನೋಡುವಂತಾಯಿತು ; ನಿನ್ನ ಜೂಚಿ-ನಿನ್ನನ್ನು ನೋಡಿ ; ನಾಲುಗ್ಗೈದು–ನಾಲ್ಕೈದು ; ವೆಲಲು–ತಿಂಗಳುಗಳು ; ಆಯೆ–ಆದುವು ; ಮುವ್ವ ಗೋಪಾಲ ; ನಿನ್ನ ರೇಯಿ–ನೆನ್ನೆ ರಾತ್ರಿ ; ಕಲಲೋ–ಕನಸಿನಲ್ಲಿ ; ನಾಕನುಲಗಟ್ಟಿನಟ್ಲುಂಡ–ನನ್ನ ಕಣ್ಣುಗಳಿಗೆ ಕಟ್ಟಿದಂತಿದ್ದ ; ವೆನ್ನುಡಾ–ಪ್ರಿಯನೆ ; ದಿಗ್ಗುನ ಲೇಚಿ–ತಟಕ್ಕನೆ ಎದ್ದು ; ವೆದಕಿ ಕಾನಕ–ಹುಡುಕಿ ಕಾಣದೆ ; ಕನ್ನೀರುಚಿ–ಕಣ್ಣೀರು ತುಂಬಿ ; ಪೈಟ–ಸೆರಗು ; ತಡಿಸಿ–ನೆನೆದು ; ಕರಗಿ–ನೊಂದು ; ಚಿಂತನೊಂದಿತಿ–ಚಿಂತಿಸಿದೆ ; ನನ್ನು–ನನ್ನನ್ನು ; ತಲಚಿತಿವೋ ಲೇದೋ-ನೆನೆದೆಯೋ ಇಲ್ಲವೋ ಕಾಣೆ ; ನಾನೋಮು ಫಲಮು–ನಾನು ಮಾಡಿದ ಪೂಜಾಫಲವಿರಬಹುದು ; ವಿಡೆಮನಿ–ತಾಂಬೂಲವನ್ನಾಗಲಿ ; ಅನ್ನಮುನು ಆಹಾರವನ್ನಾಗಲಿ ; ವೇಡುಕನಿ–ಮನರಂಜನೆಯಾಗಲಿ ; ನಿದುರಯನಿ-ನಿದ್ರೆಯನ್ನಾಗಲಿ ; ಎಡ ಬಾಸಿನದಿ–ತ್ಯಜಿಸಿದ; ವೊದಲೇಮಿಯು ಲೇದುಗದಾ-ಮೊದಲು ಹೀಗಿರಲಿಲ್ಲವಲ್ಲವೆ; ಅಡವಿಲೋ -ಕಾಡಿನಲ್ಲಿ ; ಜ್ರೊದ್ದುಗೂಕ-ಬೆಳಗಿನಿಂದ ; ಅಂಧಕಾರವ್ಮೈನ-ಇರುಳ ಕತ್ತಲವರೆಗೆ ; ವಾನಲೋ ತಡಸಿ–ಮಳೆಯಲ್ಲಿ ನೆನೆದು ; ದೇವಗಾನನಿ–ದಾರಿಗಾಣದ ; ದಾನಿವಲೆ–ಹೆಂಗಸಿನಂತೆ ; ಯುನ್ನ ತನಕು–ಇರುವ ತನಗೆ ;

ಕನ್ನವಾರು–ಕಂಡವರು ; ಆಡುಕೋನೇದಿ–ಆಡಿಕೊಳ್ಳುವುದು ; ಕನ್ನೆಲು–ಕನ್ಯೆಯರು ; ನವ್ವು ಕೊನೇದಿ–ನಗುವುದು ಹಾಸ್ಯಮಾಡುವುದು ; ವಿನ್ನವೊ ವಿನಲೇದೋ-ನಿನಗೆ ಕೇಳಿತೋ ಕೇಳಲಿಲ್ಲವೋ ; ವಿನರಾ–ಕೇಳಯ್ಯ ; ಯೀ ವಿಂತ–ಈ ಪರಿಹಾಸ್ಯವನ್ನು ; ನಿನ್ನು ಗೂಡಿನದೇ

ಮೊದಲು-ನಿನ್ನನ್ನು ಸೇರಿದಾಗಿನಿಂದ; ನೀತೋಡು-ನಿನ್ನ ಜೊತೆಯೇ; ಇದೇಲೋಕ; ವ್ಯೆ ಪ್ರಪಂಚ ವಾಗಿ, ಯುನ್ನಾನು-ಇದ್ದೇನೆ ; ವೇರೇಮನಸ್ಸೈ ಯುಂಟೆನಾ-ಬೇರೆ ಮನಸ್ಸಿನಿಂದಿದ್ದೇನೆಯೇ?

2. ಆನಂದಭೈರವಿ ತ್ರಿಪುಟತಾಳ

ಪಲ್ಲವಿ : ರೇಪು ವತ್ತುವುಗಾನಿ ಪೋರಾ । ನೇಟಿಕಿ ತಾಳಿ ತೀಪು ವತ್ತುವುಗಾನಿ ಪೋರಾ

ಅನುಪಲ್ಲವಿ : ಪ್ರಾಪುಗೋರಿತಿರಾ ನಾಸಾಮಿ ಮುವ್ವಗೋಪಾಲ ||

ಚರಣ : ರಾತಿರಿ ಪಗಲೊಕ್ಕ ತೀರುನ ನನ್ನು ರಮ್ಮುಂಟೆ ಮೂಯಿಂಟಿವಾರು
ಮೂತುಲು ತ್ರಿಪ್ಪೇರು ಮೊನ್ನ ವಚ್ಚಿತಿನನಿ
ವಾದೇಲ ತಡವಾಯೆ ವದ್ದು ನೇಟಿಕಿ ತಾಳಿ ||

2. ಮರುನಾಡೇ ನನ್ನು ಗೂಡಿತಿವಿ ಮರುಕೇಳಿ ಕಲಸಿ ನನು ಮೆಚ್ಚಿತಿವಿ
ಮರಿಯಾದ ಕಲಿಗಿನಿ ದೊರಬಿಡ್ಡ ನೀವ್ವೈತೆ
ತೆರಚಿ ಜೂಡರ ತಲುವು ತೆಲ್ಲವಾರೆನು ತೂರ್ಪು ||

3. ರಾಪು ಸೇಯಕ ನಾತೊ ಪೋರ ನನ್ನೆ-ರತಿ ನೇಲಿನ ಮುವ್ವ ಗೋಪಾಲ
ಕೋಪಗಿಂಚಿ ಪೊಯ್ಯೇವು-ಕೊನ್ನಿ ನಾಳ್ಳಾಯೆ ನೀವು
ತಾಪಮಣಗ ಲೇದು ದಯತೊ ಕಲಸಿ ಪೋರಾ ||

ಅರ್ಥ : ರೇಪು-ನಾಳೆ ; ವತ್ತುವುಗಾನಿ ಪೋರಾ-ಬರುವೆಯಂತೆ ಹೋಗು ; ನೇಟಿಕಿ-ಇಂದು ; ತಾಳಿ-ನಿಧಾನಿಸಿ ;
ಪ್ರಾಪು ಗೋರಿತಿರಾ-ನಿನ್ನ ಆಶ್ರಯಬೇಡಿದೆ; ನಾಸಾಮಿ-ನನ್ನ ಒಡೆಯ ; ರಾತಿರಿ ಪಗಲು-ರಾತ್ರಿ ಹಗಲು ; ಒಕ್ಕತೀರುನ-ಒಂದೇ ಸಮನೆ ; ನನ್ನ-ನನ್ನನ್ನು ; ರಮ್ಮಂಟೆ-ಬಾ ಎಂದರೆ ; ಮೂಂಯಿಟಿವಾರು-ನನ್ನ ಮನೆಯವರು ; ಮೂತುಲು ತ್ರಿಪ್ಪೇರು-ಮೂತಿ ತಿವಿಯುತ್ತಾರೆ ; ಮೊನ್ನ-ಮೊನ್ನೆ ; ವಚ್ಚಿತಿವಿ-ಬಂದಿದ್ದೆ ; ವಾದು-ವಾದವು ; ಏಲ-ಏಕೆ ; ತಡವಾಯೆ-ಈ ತಡ ವಾಯಿತು ; ವದ್ದು ನೇಟಿಕಿ ತಾಳಿ-ಇವತ್ತು ಬೇಡ, ತಡೆದು ಬಾ.
ಮರುನಾಡೇ-ಮಾರನೆ ದಿನವೇ ; ನನ್ನು ಗೂಡಿತಿವಿ-ನನ್ನನ್ನು ಸೇರಿದೆ ; ಮರುಕೇಳಿ-ರತಿಕ್ರೀಡೆ ; ಕಲಸಿ-ಬೆರೆದು ; ನನ್ನನ್ನು ; ಮೆಚ್ಚಿತಿವಿ-ಮೆಚ್ಚಿದೆ ; ಮರಿಯಾದ ಕಲಿಗಿನಿ-ಮರ್ಯಾದೆ ತಿಳಿದ ; ದೊರಬಿಡ್ಡ ನೀ ವ್ವೈತೆ-ರಾಜಕುಮಾರ ನೀನಾಗಿದ್ದರೆ : ತಲುಪು ತೆರಚಿ ಜೂಡರ-ತೆರೆದು ನೋಡು; ತಲುವು-ಬಾಗಿಲು ; ತೆಲ್ಲವಾರೆನು ತೂರ್ಪು-ಪೂರ್ವದಲ್ಲಿ ಬೆಳಗಾಯಿತು.
ನಾತೋ-ನನ್ನೊಂದಿಗೆ ; ರಾಪು ಸೇಯಕ-ಒರಟಾಟ ಮಾಡದೆ ; ಪೋರ-ಹೋಗು ; ನನ್ನೆರತಿ ನೇಲಿನ-ನನ್ನೊಂದಿಗೆ ರಮಿಸಿರುವ ; ಮುವ್ವಗೋಪಾಲ ; ಕೋಪಗಿಂಚಿ-ಕೋಪಿಸಿಕೊಂಡು ; ಪೊಯ್ಯೇವು-ಹೇಗಬೇಡ ; ಕೊನ್ನಿ ನಾಳ್ಳಾಯೆ-ಕೆಲವುದಿನಗಳಾದುವು ; ನೀವು-ನಿನ್ನ ; ತಾಪ ಮಣಗಲೇದು-ತಾಪ ಅಡಗಲಿಲ್ಲ ; ದಯತೋ-ದಯೆಯಿಂದ ; ಕಲಸಿ ಪೋರಾ-ನನ್ನೊಂದಿಗೆ ರಮಿಸಿ ಹೋಗು.

3. ಕೇದಾರಗೌಳ ತ್ರಿಶ್ರ ಏಕ

ಪಲ್ಲವಿ : ಪೋಯಿ ರಮ್ಮನವೇ ಮುದ್ದು ಗುಮ್ಮ

ಅನುಪಲ್ಲವಿ : ನೇಯಮುಗಾದು ವದ್ದಂಟೆ ನಿಲಿಚೇದಿ ಮೇರಗಾದು ||

ಚರಣ : ಏಲ ಕನ್ನೀರು ನಿಂಚೇವೇ-ಯೇಮಿಟಿಕಿ ಆನಬೆಟ್ಟೇವೇ
ಯೇಲ ವೇಡುಕೊನವೇ-ಯಿಪ್ಪೊದ್ದು ಮಂಚಿ ದಿನಮು

2. ತರುಣಿರೊ ವಾನಿತೊನೇಲ ತರುಚು ಮಾಟಲಾಡೇವೇ
ತರುವಾತ ನಡಿ-ಚೇ ಸುದ್ದಿ-ತಾನೇ ವಿನ ಬೊಯ್ಯೆನಿ

3. ಕಲಸಿನದೇ ಕಲ್ಲಲಾಯ-ಕಲಲೊ ನೀ ಮುದ್ದು ಲಾಯ
ಪಲುಕುಲೇಲ ಮಾಮುವ್ವ-ಗೋಪಾಲುನಿ ಮಹಾರಾಜುವಲೆನೆ ||

ಅರ್ಥ : ಮುದ್ದುಗುಮ್ಮ-ಪ್ರಿಯ ಸಖಿಯೆ? ಪೋಯಿರಮ್ಮನವೇ-ಹೋಗಿ ಬಾ ಎಂದು ಹೇಳು ; ನೇಯಮುಗಾದು-ನ್ಯಾಯವಲ್ಲ; ವದ್ದಂಟೆ-ಬೇಡವೆಂದಮೇಲೆ ; ನಿಲಿಚೇದಿ-ನಿಲ್ಲುವುದು; ಮೇರಗಾದು-ತರವಲ್ಲ ; ಏಲ-ಏಕೆ ಕನ್ನೀರುನಿಂಚೇವೆ-ಕಣ್ಣೀರು ಹರಿಸುವೆ ; ಏಮಿಟಿಕಿ-ಏಕೆ; ಆನಬೆಟ್ಟೇವೆ-ಅಪ್ಪಣೆ ಮಾಡುತ್ತಿದ್ದೀಯೇ ; ಏಲ ವೇಡುಕೊನವೆ-ಏಕೆ ಬೇಡಿಕೊಳ್ಳುವೆ ; ಈ ಪೊದ್ದು-ಈ ಹೊತ್ತು ; ಮಂಚಿದಿನಮು-ಒಳ್ಳೆಯ ದಿನ ; ತರುಣಿರೋ-ತರುಣಿಯೆ ; ವಾನಿತೋನು-ಅವನೊಂದಿಗೆ ; ಏಲ-ಏಕೆ, ತರುಚು ಮಾಟಲಾಡೇವೇ-ಬೆದಕಿ ಮಾತನಾಡುತ್ತಿದ್ದೀಯೆ ; ತರುವಾತ-ಆಮೇಲೆ ; ನಡಿಚೆ ಸುದ್ದಿ-ನಡೆಯುವ ವಿಷಯ ; ತಾನೇ ವಿನ ಬೊಯ್ಯೆನಿ-ಅವನೇ ಕೇಳಿಕೊಂಡು ಹೋಗುವನು ; ಕಲಸಿನದೇ-ಸೇರಿದ್ದೇ ; ಕಲ್ಲಲಾಯ-ತಪ್ಪಾಯಿತು ; ಕಲಲೋ-ಕನಸಿನಲ್ಲಿ ; ನೀಮುದ್ದು ಲಾಯ-ಮುದ್ದಿಸಿದ್ದಾಯಿತು ; ಪಲುಕುಲಲು-ಮಾತುಗಳು ಏಲ-ಏಕೆ ; ಮಹಾರಾಜುವಲೆನೆ-ರಾಜನಂತೆ ; ಮುವ್ವಗೋಪಾಲನೆ.

4. ಮಧ್ಯಮಾವತಿ ತ್ರಿಪುಟತಾಳ

ಪಲ್ಲವಿ : ನನ್ನು ನೀವು ತಲಚೇದಿ-ನ್ಯಾಯಮುಗಾದು

ಅನುಪಲ್ಲವಿ : ನಿನ್ನು ನೇನು ವಲಚೇದಿ ನೀತಿಗಾದು ಮುವ್ವಗೋಪಾಲ ||

ಚರಣ : ಏಪ್ಪೊದ್ದು ನಾ ಕೌಗಲಿಲೊನೆ ನಯುಚುನ್ನ ವಾಡವು
ರಾಪು ಜೇಸಿ, ಏಲಾಗೈನ ರಾನಿ ಪಕ್ಷ ಮಾಯೇ
ಕೋಪಮ್ಮೈತೆ ಘನಮಾಯೆ-ಗುಣಮೆಂತೊ ಚಕ್ಕನಾಯೇ
ಈ ಪ್ಪೊದ್ದು ಚಾಲಿಂಚುಕೊಂಟೆ-ಯಿಂತಕನ್ನ ಸುಖಮುಲೇದು ||

2. ನೇ ವಿನ್ನವಿಂಚಿನ ಮಾಟ-ನೀಕು ಸಮ್ಮತಿಗಾದು
ನೀವೆಂತ ಬಾಸ ಚೇಸಿನ-ನೇ ನಮ್ಮ ಜಾಲ
ಯಿಾ ಪಗಲಿಟ್ಲುಂಡಗ-ನಿಂಪು ಸೊಂಪುಲು ಚುಟ್ಟುನಾ
ದೇವುನಿ ಮನಸುನ ಮ್ರೊಕ್ಕಿತೆ ಕನುಲದೀ ವಿಂಚುನಟ್ಟು

3. ನೇನು ನೀವು ಮುವ್ವಗೋಪಾಲ ! ನೇಡು ಗೂಡಿಯುಂಟಿಮಿ
ಯಾನಾಟನಲೆ ನೇಮ್ಮೈನಾ ನಂದ ಮಯ್ಯಾನಾ ?
ನೀನಾ ಮನಸು ನೊಚ್ಚಿತೆ-ನೆನರು ಲೇದು ಚಾಲಿಂಚು
ಪೂನಿ ಚೆಲುಲಂದರು ಗುಂ-ಪುಲು ಗೂಡಿ ನವ್ವೇರು

ಅರ್ಥ : ನನ್ನು ನೀವು ತಲಚೇದಿ–ನನ್ನನ್ನು ನೀನು ಅಪೇಕ್ಷಿಸುವುದು, ನ್ಯಾಯಮುಗಾದು –ನ್ಯಾಯವಲ್ಲ; ನಿನ್ನು ನೇನು ವಲಚೇದಿ–ನಿನ್ನನ್ನು ನಾನು ಬಯಸುವುದು; ನೀತಿಗಾದು–ನೀತಿಯಲ್ಲ; ಏಪ್ರೊದ್ದು–ಯಾವ ಹೊತ್ತು ; ನಾ ಕೌಗಲಿಲೊ–ನನ್ನ ಸೇರುವಿಕೆಯಲ್ಲಿ; ನೆನಯು ಚುನ್ನವಾಡವು–ನೆನೆಯುತ್ತಲೇ ಇರುವ; ರಾಪುಜೇಸಿ–ಒರಟಾಟಮಾಡಿ; ಏಲಾಗೈನ–ಹೇಗಾದರೂ ; ರಾನಿಪಕ್ಷಮಾಯೇ–ಒರದೆಹೋದ ಪಕ್ಷದಲ್ಲಿ ; ಕೋಪಮ್ಮೈತೆ–ಕೋಪಿಸಿಕೊಂಡರೂ ; ಘನಮಾಯೇ–ಒಳ್ಳೆಯದಾಯಿತು ; ಗುಣಮೆಂತೋ–ಗುಣವಿದ್ದರೂ ; ಚಕ್ಕನಾಯೇ–ಒಳ್ಳೆಯದಾಯಿತು ; ಈ ಪ್ರೊದ್ದು–ಈ ಹೊತ್ತು ; ಚಾಲಿಂಚುಕೊಂಟೆ–ಬರುವುದನ್ನು ಬಿಟ್ಟರೆ ; ಇಂತಕ ಸುಖಮುಲೇದು–ಇದಕ್ಕಿಂತ ಬೇರೆ ಸುಖವಿಲ್ಲ ; ನೇ ವಿನ್ನ ವಿಂಚಿನ ಮಾಟ–ನಾನು ಬಿನ್ನವಿಸಿದ ಮಾತು ನೀಕು ಸಮ್ಮತಿಗಾದು–ನಿನಗೆ ಸಮ್ಮತವಾಗುವುದಿಲ್ಲ; ನೀವೆಂತ ಭಾಸ ಜೇಸಿನ–ನೀನೆಷ್ಟು ಭಾಷೆಯಯಿತ್ತರೂ; ನೇನಮ್ಮ ಜಾಲ–ನಾನು ನಂಬಲಾರೆ; ಈ ವಗಲು–ಈ ದುಃಖಗಳು ; ಇಟ್ಲುಂಡಗಾ–ಹೀಗಿರಲು : ಇಂಪು ಸೊಪ್ಪಲು ಚುಟ್ಟುನಾ–ನೆಮ್ಮದಿಯಾಗುತ್ತದೆಯೇ ? ದೇವುನಿ-ದೇವನ ; ಮನಸುನ ಮೊಕ್ಕಿತೆ–ಮನಸ್ಸಿನಲ್ಲಿ ನೆನೆದರೆ ; ನೇನು ನೀವು–ನಾನು ನೀನು ; ನೇಡು-ಇಂದು ; ಗೂಡಿಯುಂಟಿಮಿ–ಸೇರಿದ್ದೇವೆ ; ಈ ನಾಟಿ ವಲೆನೇ ವ್ಯೆನಾ–ಇಂದಿನಂತೆಯೇ ಏನಾದರೂ ; ಆನಂದಮಯ್ಯಿನಾ–ಆನಂದವುಂಟಾಯಿತೆ ; ನೀ ನಾಮನಸುನೊಚ್ಚಿತೆ–ನಿನ್ನ ನನ್ನ ಮನಸ್ಸುಗಳು ತೊಂದರೆಪಟ್ಟರೆ ನೆನರುಲೇದು–ಪ್ರೀತಿ ಇರುವುದಿಲ್ಲ ; ಚಾಲಿಂಚು–ಸಾಕುಮಾಡು ; ಚೆಲುಲು–ಸಖಿಯರು ; ಪೂನಿಗುಂಪಲುಗೂಡಿ–ಗುಂಪಾಗಿ ಸೇರಿ ; ನವ್ವೆರು–ನಗುತ್ತಾರೆ.

5. ಕಲ್ಯಾಣಿ ತ್ರಿಪುಟ

ಪಲ್ಲವಿ : ಕಂಚಿ ವರಮನಿ ಪೊಂದು–ಕದ್ದೊ ? ಲೇದೊ ?

ಅನುಪಲ್ಲವಿ : ವಂಚನ ಮುವ್ವ ಗೋಪಾಲು ವರದುಡೈನ ಚಕ್ಕನಿ ||

ಚರಣ : ನೀವು ದಾಚಕ ತೆಲ್ಪವೇ ಅಲ್ಲವಾನಿ
ಭಾವಮು ಜೂಜೇಪಟ್ಲೆ ಪತಿಯ್ಯೆನಟ್ಲು ಮತಿ ತೋಚೆನೆ||

2. ನೀವೇಯಾಡಕು ಬೋದುವೊ ಆವಿಭುಡಿಂದು ವಚ್ಚುನೊ ?
ಯೀವಿವರಮುಲು ನೇನು–ಯಿನ್ನಾಳ್ಳುಗ ಯೆರುಗನೈತಿ ||

3. ನೀವು ಬತಿ ಮಾಲಿತಿವೊ ನೆಲತ ಅತಡು ವ್ಯೆಬಡನೊ ?
ದೇವುನಾಸ ನೀವಿಂತ ದಿಗುಲು ಪಡನೇಲ ||

ಅರ್ಥ : ಕಂಚಿ ವರದುನಿ ಪೊಂದು–ಕಂಚಿಯ ವರದನನ್ನು ಪಡೆಯುವುದು ; ಕದ್ದೊ ಲೇದೊ–ನನಗೆ ಉಂಟೋ ಇಲ್ಲವೋ? ; ವಂಚನ–ಮೋಸಗಾರನಾದ ; ವರದುಡೈನ ಚಕ್ಕನಿ–ಒಳ್ಳೆಯವನಾದ ನೀವುದಾಚಕ ತೆಲ್ಪವೆ–ನೀನು ಮರೆಮಾಚದೆ ತಿಳಿಸು ; ಅಲ್ಲವಾನಿ–ಅವನ ; ಭಾವಮುಚೂಚಿ ಪಟ್ಲೆ–ಇಂಗಿತವನ್ನು ನೋಡಿದರೆ ; ಪತಿಯ್ಯೆನಟ್ಲು -ಗಂಡನಾದಂತೆ ; ಮತಿತೋಚೆನೇ-ಮನಸ್ಸಿಗೆ ತೋಚುತ್ತದೆಯಲ್ಲ !

ನೀವೇ ಅಡುಕು ಬೋದುವೋ–ನೀನೇ ಅಲ್ಲಿಗೆ ಹೋಗುತ್ತೀಯೋ ; ಆ ವಿಭುವು ; ಇಂದು ವಚ್ಚೆನೋ-ಇಲ್ಲಿಗೆ ಬರುವನೋ ; ಈ ವಿವರಮುಲು–ಈ ವಿವರವನ್ನು; ನೇನು–ನಾನು ; ಇನ್ನಾ–

ಇಷ್ಟು ದಿನಗಳಾದರೂ ; ಯೆರುಗನ್ಯೈತಿ–ತಿಳಿಯದಾದೆ ; ನೀವು ಬತಿಮಾಲತಿನೋ–ನೀನೇ ಬೇಡಿ ಕೊಂಡೆಯೋ ; ನೆಲತ–ಸಖಿಯೆ ; ಅತಡು–ಅವನು ; ಪೈಬಡನೋ–ಮೇಲೆಬಿದ್ದು ಬಂದನೋ ; ದೇವುನಾಸ–ದೇವರನ್ನು ಆಶ್ರಯಿಸಲು ; ನೀವಿಂತದಾಗುಲು ಪಡನೇಲ–ನೀನು ಏಕೆ ಇಷ್ಟು ದಿಗಿಲು ಪಡುತ್ತಿದ್ದೀಯೆ ?

6. ಅಠಾಣ . ಛಾಪುತಾಳ ಸ್ವಾತಿ ತಿರುನಾಳ್

ಪಲ್ಲವಿ : ವಲಪು ತಾಳ ವಶಮಾ ನಾ ಸಾಮಿಕಿ ಚಲಮು ಸೇಯ ನ್ಯಾಯಮಾ ||

ಅನುಪಲ್ಲವಿ : ಅಲಗುವಿಲ್ತುನ ಸಮಾನುಡೌ ಶ್ರೀ ಪದ್ಮನಾಭುಡು ನೆಲತಾಯಿಪುಡು ನನು ನಿರಾಕರಿಂಚೆನೆ ||

ಚರಣ : ಚಿರುತ ಪ್ರಾಯಮುನ್ನಾಡೇ ಚಿಗುರು ಬೋಣಿವಾನಿ
ಕರುಣಾಸಾಗರುಡನಿ ಕಲಿಗಿ ಚಾಲನಮ್ಮಿತಿ
ಮರುನಿ ಬಾಣಮು ಜಾತ ಮಗುವ ನಾ ಮನಸೆಂತೋ
ಪರವಶಮಾಯನೇ ಭಾಗ್ಯಮಿಟುಲಾಯೆನೆ ||

2. ಇಲನು ನಾ ಪ್ರಾಣೇಶುಡೇ ಮಾನಿನಿತೊ ಗೂಡಿ
ಜಲಜಾಕ್ಷಿ ಮಿತಿಮೀರಿ ಸರಸಲಾಡುಚುನ್ನಡೊ
ಪಲುಮಾರು ನನ್ನು ಜೂಚಿ ಪಲುಕುಲಾಡಿನದೆಲ್ಲ
ತೆಲಿಯ ವಚ್ಚಿನೇವೋ ಚೆಲಿಯರಿ ಈ ವೇಳ ||

3. ಸೋಮಕಿರಣಮು ಜಾತ ಸೊಗಸ್ಯೆನ ನಿನ್ನಟಿತೇಯಿ
ರಾಮ ರಾಮ ನಾಕು ರಮಣಿಯುಗ ಮಾಯೆನೆ
ಕಾಮ ಕೇಳಿಲೊ ನನು ಕಲಸಿಯುಂಡಿನ ವಿಭುಡು
ನಾಮೀದ ನಿನ್ನ ನೆನರು ನಾತಿ ಮರಚಿತಿನೇಮೋ ||

## ೯. ಜಾವಳಿಗಳು

1. ಯಮುನ್ ಕಲ್ಯಾಣಿ : ದೇಶಾದಿ — ಧರ್ಮಪುರಿ ಸುಬ್ಬರಾವ್

ಪಲ್ಲವಿ : ಅದಿ ನೀಪ್ಪೈ ಮರುಲುಕೊನ್ನದಿರಾ

ಚರಣ : ರಾಮ ರಘು ಅಭಿರಾಮ
ರಾಮ ರಾಮ ನೀ ಸಮಮುನು ಕಾನಕಲೇ (ರಾ)

2. ದಾತಲಲೋ ನೆರ ದಾತವೌ ಶ್ರೀ
ಧರ್ಮಪುರೀಶ ತಾಮಸಮೇಲನುರಾ ||

2. ಕಲ್ಯಾಣಿ : ರೂಪಕತಾಳ — ಪಟ್ಟಾಭಿರಾಮಯ್ಯ

ಪಲ್ಲವಿ : ಎಂತಟಿ ಕುಲುಕೇ
ಇಂತಿರೋ ಕಾಂತುನಿ ಕಿವು (ಡೆಂತಟಿ ಕುಲುಕೇ)

ಅನುಪಲ್ಲವಿ : ಪಂತಮುಗಲ ಪರಾಂಭೋಜ ಮುಖಿ ಜೆನಗಿನಂದುಕು ||

ಚರಣ : ಹೋಯಲುಮೀರಿ ವೀಥಿಲೋನ ಬಯಲುದೇರಿನನ್ನು ಜೂಚಿ
ಭಯಮುಲೇಕ ಪಾಟ ಪಾಡಿ ಕನ್ನುಸ್ವೈಗ ಜೇಯುನೇ ಇದಿ ||

2. ಮರಪುಲೇಕ ನಿನ್ನರೇಯಿ ಧರಪುರೀಶುಡೈನ ಸಾಮಿ
ಮರುನಿಕೇಳಿಲೋನ ನಾತೋ ಮಾಟಲಾಡದೇಮಿಟೆದಿ ||

3. ಬಿಲಹರಿ : ರೂಪಕತಾಳ — ಪಟ್ಟಾಭಿರಾಮಯ್ಯ

ಪಲ್ಲವಿ : ಪಾರಿಪೋವಲೇರಾ ನೀರಜಾಕ್ಷುಡು ವೆಡಲರಾ ||

ಅನುಪಲ್ಲವಿ : ನಾರೀಮಣುಲು ದಾರಿನಿ ಗನ ದೂರೆನು ಗನುಕ ||

ಚರಣ : ದೂರಿಪೋಯಿನ ಕ್ರೂರುಡಾ ಮಗಡೂರು ಜೇರಿಯೇ ಮಾರಡಿಂಚೆನೇ
ಆ ರೀತುಲ ವಿಚಾರಿಂಚುಕೊರಕೇ ರಾನೇವಿಪುಡೇ ||

2. ಭಾವಮಾಗುಣ ಭಾವಮುಲ್ ತೆಲಿಸೇ
ವಿಧಮುನೇ ಪಾಲಿಡಿಂಚುನು
ಕೇಳಿತೋ ನೀಕೇ ದಯನುಚುಕೇರಾನೇವಿಪುಡೇ ||

4. ಸುರುಟಿ : ರೂಪಕತಾಳ — ಪಟ್ಟಾಭಿರಾಮಯ್ಯ

ಪಲ್ಲವಿ : ಮರಿಯಾದ ತೆಲಿಯಕನೇ ಮಾಟಲಾಡುಟ ತಗುನಟೇ ||

ಅನುಪಲ್ಲವಿ : ಪರಿಹಾಸಮುಜೇಯು ತಗಿನ ವರುಸ ಕಲಿಗಿಯುಂಟೇನೇವಿ ||

ಚರಣ : ಸರಸ ಸಲ್ಲಾಪಮುಲಕು ಸಮಯಮುಕಾಗಾದೇ ಯೇವೆ
ಸರಸಿಜಾಕ್ಷಿ ನಾವಂಟಿ ಸತುಲು ಗುಂಪುಗೂಡಿಯುಂಡಗ ||

2. ವೆಲದಿರೋ ನನ್ನುಗೂಡಿನಟ್ಲು ವೆಂಕಟೇಶ್ವರು ನೀಪ್ಪೈ
ಬಲವಂತಮುಗಾ ನೇನು ವಲಚಿ ವಚ್ಚಿನಾನೇವಿ ||

5. ಕಾನಡ ರೂಪಕ — ಧರ್ಮಪುರಿ ಸುಬ್ಬರಾಯರು

ಪಲ್ಲವಿ : ವಾನಿಪೊಂದು ಚಾಲುವದ್ದನೇ ವನಿತಾಮಣಿ ಅಲ

ಅನುಪಲ್ಲವಿ : ಚಾನ ಮಾಟಲೆಲ್ಲ ದಾನಿ ಸದನಮೇ ಸತಮನುಚುಡುಂಡೇಡಿ

ಚರಣ : ಕಮ್ಮ ವಿಲ್ತುಡೇಯು ಅಮ್ಮುಲ ಪೋಟುನ
ರೇಮ್ಮುನ ನಾಟನ ಕಮ್ಮವ್ರಾಸಿಚ್ಚಿನ
ಕೊಮ್ಮನಂಪಿ ವೇಗತೋಡಿತೆಮ್ಮ ನಿನ್ನೆದಾನಿ
ಪೊಮ್ಮನಿ ಬಲ್ಕಿನ

6. ಸೈಂಧವಿ : ಆದಿತಾಳ — ಸ್ವಾತಿ ತಿರುನಾಳ್

ಪಲ್ಲವಿ : ಇಟುಸಾಹಸಮುಲು ಯಾಲನಾಪ್ಪೈ ಚಕ್ಕನಿ ಸಾಮಿ

ಅನುಪಲ್ಲವಿ : ಇಟಲುವಗಲೂ ತಾಳ ನಾತರಮಾ

ಚರಣ : ಯಿಕಚಿನ್ನದಾನನೇನು ಮಗುವಾರಿನಿಮುಖಮು
ಯೆರಗನೆಯುನ್ನನು ವಗಕಾಸಾರಿ ನೀಕಿದಿ ಮೇರಾ
ಗಾದೇವಲಪು ನ್ಯಾಯಮೆರುಗು ನಾ ಸಾಮಿ ||

2) ಮನಸು ರಂಜಿತ ಮ್ಯೆಯೌ ನೀಕು ತಗಿನ ಮಗುವತೊ
ಈವಗಲುಂಚವಲಸುವಿನ ಮ್ಯೆಯ್ಯರಾ ನಾ ಪಲುಕುಲು
ಈ ವ್ಯಾಳಾನುವಿಂತಲು ಚಾಲು ಚಾಲು

3) ಸರಸಿಜನೇತ್ರುಡನಿ ಕರುಗಾವಲ್ಲ ಚಾಲ ನಾ ಸಾಮಿ
ಯೌವನ ಮುವಚೇನಾಡು ಮರುಕೇಳಿಲೊ ನೇ ನಿನು
ಲಾಳಿಂತುನು ಸರಸಪಂಕಜನಾಭ ನಾ ಸಾಮಿ ||

# ೧೦. ದೇವರ ನಾಮಗಳು

ತೋಡಿ : ರೂಪಕತಾಳ ಶ್ರೀಪಾದರಾಜರು

ಪಲ್ಲವಿ : ಕಂಗಳಿದ್ಯಾತಕೊ ಕಾವೇರಿ ರಂಗನ ನೋಡದ

ಅನುಪಲ್ಲವಿ : ಜಗಂಗೊಳಗೆ ಮಂಗಳಮೂರುತಿ
ರಂಗನ ಶ್ರೀಪಾದಂಗಳ ನೋಡದ

ಚರಣ : ಎಂದಿಗಾದರೊಮ್ಮೆ ಜನರು
ಬಂದು ಭೂಮಿಯಲ್ಲಿ ನಿಂದು
ಚಂದ್ರ ಪುಷ್ಕರಿಣಿ ಸ್ನಾನವ ಮಾಡಿ ಆ
ನಂದದಿಂದಲಿ ರಂಗನ ನೋಡದ ||

2. ಹರಿ ಪಾದೋದಕ ಸಮ ಕಾವೇರಿ
ವಿರಜಾನದಿಯಲಿ ಸ್ನಾನವ ಮಾಡಿ
ಪರಮ ವೈಕುಂಠ ರಂಗಮಂದಿರ
ಪರವಾಸುದೇವನ ನೋಡದ ||

3. ಹಾರ ಹೀರ ವೈಜಯಂತಿ
ತೋರ ಮುತ್ತಿನ ಸರವ ಧರಿಸಿ
ತೇರನ್ನೇರಿ ಬೀದೀಲಿ
ಮೆರೆವ ರಂಗವಿಠಲನ ನೋಡದ ||

ಅಠಾಣ : ಖಂಡ ಛಾಪುತಾಳ ಪುರಂದರದಾಸ

ಪಲ್ಲವಿ : ಸಕಲ ಗ್ರಹಬಲನೀನೆ ಸರಸಿಜಾಕ್ಷ ||

ಅನುಪಲ್ಲವಿ : ನಿಖಿಳ ರಕ್ಷಕ ನೀನೆ ವಿಶ್ವವ್ಯಾಪಕನೆ ||

ಚರಣ : ರವಿಚಂದ್ರ ಬುಧ ನೀನೆ ರಾಹುಕೇತುವು ನೀನೆ
ಕವಿಗುರು ಶನಿಯು ಮಂಗಳನು ನೀನೆ
ದಿವ ರಾತ್ರಿಯು ನೀನೆ ನವ ವಿಧಾನವು ನೀನೆ
ಭವರೋಗಹರ ನೀನೆ ಭೇಷಜನು ನೀನೆ ||

2. ಪಕ್ಷಮಾಸವು ನೀನೆ ಪರ್ವಕಾಲವು ನೀನೆ
ನಕ್ಷತ್ರ ಯೋಗತಿಥಿ ಕರಣ ನೀನೆ
ಅಕ್ಷಯವಿತ್ತು ದ್ರೌಪದಿಯ ಮಾನವ ಕಾಯ್ದ
ಪಕ್ಷಿವಾಹನ ದೀನರಕ್ಷಕನು ನೀನೆ ||

3. ಋತುವತ್ಸರವು ನೀನೆ ವ್ರತ ಯುಗಾದಿಯು ನೀನೆ
ಕ್ರತು ಹೋಮ ಯಜ್ಞ ಸದ್ಗತಿಯು ನೀನೆ
ಜಿತವಾಗಿ ಎನ್ನೊಡೆಯ ಪುರಂದರ ವಿಠ್ಠಲನೆ
ಸ್ತುತಿಗೆ ಸಿಲುಕದಪ್ರತಿಮ ಮಹಿಮ ನೀನೆ

**2.** ಶಂಕರಾಭರಣ : ಅಟ್ಟತಾಳ ಪುರಂದರದಾಸ

ಪಲ್ಲವಿ : ಪೋಗದಿರೆಲೊ ರಂಗ ಬಾಗಿಲಿಂದಾಚೆಗೆ

ಅನುಪಲ್ಲವಿ : ಭಾಗವತರು ಕಂಡರೆತ್ತಿ ಕೊಂಡೊಯ್ವರೋ ||

ಚರಣ : ಸುರಮುನಿಗಳು ತಮ್ಮ ಹೃದಯಗಹ್ವರದಲ್ಲಿ
ಪರಮಾತ್ಮನ ಕಾಣದರಸುವರೊ
ದೊರಕದ ವಸ್ತುವು ದೊರಕಿತು ತಮಗೆಂದು
ಹರುಷದಿಂದಲಿ ಬಂದು ಬಿಗಿದೆತ್ತಿ ಕೊಂಬರೊ ||

2. ಅಗಣಿತ ಗುಣ ನಿನ್ನ ಜಗದ ನಾರಿಯರೆಲ್ಲ
ಹಗೆಯಾಗಿ ನುಡಿವರೊ ಗೋಪಾಲ
ಮಗುಗಳ ಮಾಣಿಕ್ಯ ತಗುಲಿತು ಕರಕೆಂದು
ಬೇಗದಿಂದಲಿ ಬಂದು ಬಿಗಿದಪ್ಪಿಕೊಂಬರೊ ||

3. ದಿಟ್ಟನಾರಿಯರೆಲ್ಲ ಇಷ್ಟವ ಸಲಿಸೆಂದು
ಅಟ್ಟಿಟ್ಟ ಬೆನ್ನಟ್ಟಿ ಬರುತಿಹರೊ
ಸೃಷ್ಟೀಶ ಪುರಂದರ ವಿಠ್ಠಲರಾಯನೆ
ಇಷ್ಟಿಷ್ಟು ಬೆಣ್ಣೆಯ ಕೊಡುವೆನು ಗೋಪಾಲ ||

**3.** ಕಾಂಭೋಜಿ : ಝಂಪೆತಾಳ ಪುರಂದರದಾಸ

ಪಲ್ಲವಿ : ಈ ಪರಿಯ ಸೊಬಗಾವ ದೇವರಲಿ ಕಾಣೆ

ಅನುಪಲ್ಲವಿ : ಗೋಪೀ ಜನಪ್ರಿಯ ಗೋಪಾಲಗಲ್ಲದೆ ||

ಚರಣ : ದೊರೆಯುತನದಲಿ ನೋಡೆ ಧರಣಿದೇವಿಯ ರಮಣ
ಸಿರಿಯುತನದಲಿ ನೋಡೆ ಶ್ರೀಕಾಂತನು
ಹಿರಿಯುತನದಲಿ ನೋಡೆ ಸರಸಿಜೋದ್ಭವನಯ್ಯ
ಗುರುವುತನದಲಿ ನೋಡೆ ಜಗದಾದಿಗುರುವು ||

2. ಪಾವನತ್ವದಿ ನೋಡಿ ಅಮರಗಂಗಾ ಜನಕ
ದೇವತ್ವದಲಿ ನೋಡೆ ದಿವಿಜರೊಡೆಯ
ಲಾವಣ್ಯದಲಿ ನೋಡೆ ಲೋಕ ಮೋಹಕನಯ್ಯ
ಆವಥೈರ್ಯದಿ ನೋಡೆ ಅಸುರಾಂತಕ ||

3. ಗಗನದಲಿ ಸಂಚರಿಪ ಗರುಡದೇವನೆ ತುರಗ
ಜಗತೀಧರಶೇಷ ಪರ್ಯಂಕ ಶಯನ
ನಿಗಮಗೋಚರ ಪುರಂದರ ವಿಠಲಗಲ್ಲದೆ
ಮಿಗಿಲಾದ ದೈವಗಳಿಗೀ ಭಾಗ್ಯವುಂಟೆ ||

4. ಕಲ್ಯಾಣಿ : ಅಟ್ಟತಾಳ ಪುರಂದರದಾಸ

ಪಲ್ಲವಿ : ಎಲ್ಲಿರುವನೋ ರಂಗ ಎಂಬ ಸಂಶಯ ಬೇಡ
ಅನುಪಲ್ಲವಿ : ಎಲ್ಲಿ ಭಕ್ತರು ಕರೆದರಲ್ಲೆ ಒದಗುವನು ||
ಚರಣ : ತರಳ ಪ್ರಹ್ಲಾದ ಶ್ರೀಹರಿ ವಿಶ್ವಮಯನೆಂದು
ಬರೆದೋದಲವನ ಪಿತ ಕೋಪದಿಂದ
ಸ್ಥಿರವಾದಡೀ ಕಂಬದೊಳು ತೋರು ತೋರೆನಲು
ಭರದಿ ಬರಲದಕೆ ವೈಕುಂಠ ನೆರೆಮನೆಯೆ ||
2. ಪಾಪಕರ್ಮವ ಮಾಡಿದಜಮಿಳನ ಯಮಭಟರು
ಕೋಪದಿಂದೆಳೆಯುತಿರೆ ಭೀತಿಯಿಂದ
ತಾ ಪುತ್ರನನು ಕರೆಯೆ ಕೇಳಿ ರಕ್ಷಿಸೆ ಶ್ವೇತ
ದ್ವೀಪವೀ ಧರೆಗತಿ ಸಮೀಪದಲ್ಲಿಹುದೇ ||
3. ಕರಿರಾಜನನು ನೆಗಳು ನುಂಗುತಿರೆ ಭಯದಿಂದ
ಮೊರೆಯಿಡಲು ಕೇಳಿ ಅತಿ ತ್ವರಿತದಿಂದ
ಕರುಣದಲಿ ಬಂಧನವ ಬಿಡಿಸಲಾ ಗಜರಾಜ
ನಿರುವ ಸರಸಿಗೆ ಅನಂತಾಸನವು ಮುಮ್ಮನೆಯೆ ||
4. ಕುರುಪತಿಯು ದ್ರೌಪದಿಯ ಸೀರೆಯನು ಸೆಳೆಯುತಿರೆ
ತರುಣಿ ಹಾಕೃಷ್ಣ ಎಂದೊದರೆ ಕೇಳಿ
ಭರದಿಂದ ಅಕ್ಷಯಾಂಬರವಿತ್ತ ಹಸ್ತಿನಾ
ಪುರಿಗು ದ್ವಾರಾವತಿಗು ಕೂಗಳತೆಯೆ ||
5. ಅಣು ಮಹತ್ತುಗಳಲ್ಲಿ ಪರಿಪೂರ್ಣನೆಂದೆನಿಸಿ
ಗಣನೆಯಿಲ್ಲದ ಮಹಾಮಹಿಮನೆನಿಪ
ಘನ ಕೃಪಾನಿಧಿ ನಮ್ಮ ಪುರಂದರ ವಿಠ್ಠಲನು
ನೆನೆದವರ ಮನದಲ್ಲೆ ಇಹನೆಂಬ ಬಿರುದಿರಲು ||

5. ವಸಂತ ಆದಿತಾಳ ಶ್ರೀಪಾದರಾಜ

ಪಲ್ಲವಿ : ನಾನಿನ್ನೊಳೇನೂ ಬೇಡುವುದಿಲ್ಲ ಎನ್ನ
ಅನುಪಲ್ಲವಿ : ಹೃದಯ ಕಮಲದೊಳು ನೆಲಸಿರೊ ಹರಿಯೆ ||

ಚರಣ : ಶಿರ ನಿನ್ನ ಚರಣಕೆ ಎರಗಲಿ ಚಕ್ಷು
ಎರಕದಿಂದಲಿ ನಿನ್ನ ನೋಡಲಿ ಹರಿಯೆ
ಕರ್ಣ ಗೀತಂಗಳ ಕೇಳಲಿ ನಾಸಿಕ
ನಿರುಮಾಲ್ಯಾನುದಿನ ಘ್ರಾಣಿಸಲಿ ಹರಿಯೆ ||

2. ನಾಲಿಗೆ ನಿನ್ನ ಕೊಂಡಾಡಲಿ ಎನ್ನ
ತೋಳು ಕರಂಗಳ ಮುಗಿಯಲಿ ಹರಿಯೆ
ಕಾಲು ತೀರ್ಥಯಾತ್ರೆಗೆ ಪೋಗಲಿ ಮನ
ಬಲ್ಪಿನಿಂದಲಿ ನಿನ್ನ ಸ್ಮರಿಸಲಿ ಹರಿಯೆ ||

3. ಚಿತ್ತ ನಿನ್ನೊಳು ಮುಳುಗಾಡಲಿ ನಿನ್ನ
ಭಕ್ತ ಜನರ ಸಂಗ ದೊರಕಲಿ ಹರಿಯೆ
ವೃತ್ತಿ ತತ್ವಯೋಗಾಭ್ಯಾಸಕ್ಕಾಗಲಿ ರಂಗ
ವಿಠಲ ನಿನ್ನ ದಯವಾಗಲಿ ಹರಿಯೆ ||

6. ಕೇದಾರಗೌಳ ಖಂಡ ಛಾಪುತಾಳ ಕನಕದಾಸರು

ಪಲ್ಲವಿ : ತಲ್ಲಣಿಸದಿರು ಕಂಡ್ಯ ತಾಳು ಮನವೇ ||

ಅನುಪಲ್ಲವಿ : ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ||

ಚರಣ : ಬೆಟ್ಟದಾ ತುದಿಯಲ್ಲಿ ಹುಟ್ಟಿದ ವೃಕ್ಷಕ್ಕೆ
ಕಟ್ಟೆಯನು ಕಟ್ಟಿ ನೀರೆರೆದವರು ಯಾರೊ
ಹುಟ್ಟಿಸಿದ ದೇವ ತಾ ಹೊಣೆಗಾರನಾಗಿರಲು
ಗಟ್ಯಾಗಿ ಸಲಹುವನು ಇದಕ್ಕೆ ಸಂಶಯವಿಲ್ಲ ||

2. ನವಿಲಿಗೆ ಚಿತ್ರ ಬರೆದವರು ಯಾರು
ಪವಳದ ಲತೆಗೆ ಕೆಂಪಿತ್ತವರು ಯಾರು
ಸವಿಮಾತಿನರಗಿಳಿಗೆ ಹಸುರು ಬರೆದವರಾರು
ಇವೆಲ್ಲ ಮಾಡಿದ ದೇವ ಸಾಕಲಾರದೆ ಬಿಡುವನೆ ||

3. ಕಲ್ಲಿನಲಿ ಹುಟ್ಟಿ ತಾ ಕೂಗುವ ಕಪ್ಪೆಗೆ
ಅಲ್ಲಿ ಆಹಾರವ ತಂದೀಯುವವರಾರು
ಬಲ್ಲಿದನು ನೆಲೆಯಾದಿ ಕೇಶವರಾಯ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ||

4. ಅಡವಿಯೊಳಗಾಡುವ ಮೃಗಪಕ್ಷಿಗಳಿಗೆಲ್ಲ
ಅಡಿಗಡಿಗೆ ಆಹಾರವಿತ್ತವರು ಯಾರು
ಪಡೆದ ಜನನಿಯ ತೆರದಿ ಸ್ವಾಮಿ ಹೊಣೆಗೀಡಾಗಿ
ಬಿಡದೆ ರಕ್ಷಿಪನಿದಕೆ ಸಂದೇಹಬೇಡ ||

ಕಾಂಭೋಜಿ ಖಂಡಛಾಪು ಕನಕದಾಸ

ಪಲ್ಲವಿ : ನೀ ಮಾಯೆಯೊಳಗೊ ನಿನ್ನೊಳು ಮಾಯೆಯೋ

ಅನುಪಲ್ಲವಿ : ನೀ ದೇಹದೊಳಗೋ ನಿನ್ನೊಳು ದೇಹವೋ ||

ಚರಣ : ಬಯಲು ಆಲಯದೊಳಗೊ ಆಲಯವು ಬಯಲೊಳಗೊ
ಬಯಲು ಆಲಯವೆರಡು ನಯನದೊಳಗೊ
ನಯನ ಬುದ್ಧಿಯ ಒಳಗೊ ಬುದ್ಧಿ ನಯನದ ಒಳಗೊ
ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ ||

2\. ಸವಿಯು ಸಕ್ಕರೆಯೊಳಗೊ ಸಕ್ಕರೆಯು ಸವಿಯೊಳಗೊ
ಸವಿಯು ಸಕ್ಕರೆಯೆರಡು ಜಿಹ್ವೆಯೊಳಗೊ
ಜಿಹ್ವೆ ಮನಸಿನ ಒಳಗೊ ಮನಸು ಜಿಹ್ವೆಯ ಒಳಗೊ
ಜಿಹ್ವೆ ಮನಸುಗಳೆರಡು ನಿನ್ನೊಳಗೊ ಹರಿಯೆ ||

3\. ಕುಸುಮದಲಿ ಗಂಧವೋ ಗಂಧದಲಿ ಕುಸುಮವೊ
ಕುಸುಮ ಗಂಧಗಳೆರಡು ಆಘ್ರಾಣದೊಳಗೊ
ಅಸಮಭವ ಕಾಗಿನೆಲೆಯಾದಿ ಕೇಶವರಾಯ
ಉಸುರಲಿನ್ನಳವಲ್ಲ ಎಲ್ಲ ನಿನ್ನೊಳಗೊಹರಿಯೆ

# ೧೧. ವಚನಗಳು

1. ರಂಜನಿ ಆದಿತಾಳ ಬಸವೇಶ್ವರ

ಕಲ್ಲ ನಾಗರ ಕಂಡರೆ ಹಾಲನೆರೆ ಎಂಬರು
ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ !
ಉಂಬ ಜಂಗಮ ಬಂದರೆ ನಡೆ ಎಂಬರು
ಉಣ್ಣದ ಲಿಂಗಕ್ಕೆ ಬೋನವ ಹಿಡಿ ಎಂಬರಯ್ಯ !
ನಮ್ಮ ಕೂಡಲ ಸಂಗನ ಶರಣರ ಕಂಡು
ಉದಾಸೀನವ ಮಾಡಿದರೆ
ಕಲ್ಲತಾಗಿದ ಮಿಟ್ಟೆಯಂತಪ್ಪರಯ್ಯ !

2. ಷಣ್ಮುಖಪ್ರಿಯ ಆದಿತಾಳ ಬಸವೇಶ್ವರ

ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವುದಯ್ಯ
ಚಂದ್ರ ಕುಂದೆ ಕುಂದುವುದಯ್ಯ
ಚಂದ್ರಂಗೆ ರಾಹು ಅಡ್ಡಬಂದಲ್ಲಿ
ಅಂಬುಧಿ ಬೊಬ್ಬಿಟ್ಟಿತೇ ಅಯ್ಯ
ಅಂಬುಧಿಯ ಮುನಿ ಆಪೋಶನವ ಕೊಂಡಲ್ಲಿ
ಚಂದ್ರಮನಡ್ಡಬಂದನೇ ಅಯ್ಯ ?
ಆರಿಗಾರೂ ಇಲ್ಲ–ಕೆಟ್ಟವಂಗೆ ಕೆಳೆಯಿಲ್ಲ,
ಜಗದ ನಂಟ ನೀನೇ ಅಯ್ಯ ಕೂಡಲ ಸಂಗಮದೇವ ||

3. ಮೋಹನ ಆದಿತಾಳ ಅಲ್ಲಮಪ್ರಭು

ಗಗನವೇ ಗುಂಡಿಗೆ
ಆಕಾಶವೆ ಅಗ್ಘವಣಿ
ಚಂದ್ರ ಸೂರ್ಯರಿಬ್ಬರೂ ಪುಷ್ಪ ನೋಡಾ !
ಬ್ರಹ್ಮ ಧೂಪ
ವಿಷ್ಣು ದೀಪ
ರುದ್ರನೋಗರ ಸಯಿಧಾನ ನೋಡಾ !
ಗುಹೇಶ್ವರ ಲಿಂಗಕ್ಕೆ ಪೂಜೆ ನೋಡಾ !

4. ಕಲ್ಯಾಣಿ ಆದಿತಾಳ ಮಹಾದೇವಿಯಕ್ಕ

ಹೊಳೆವ ಕೆಂಜೆಡೆಗಳ ಮೇಲೆ ಎಳೆವೆಳದಿಂಗಳು
ಫಣಿಮಣಿ ಕರ್ಣಕುಂಡಲದವ ನೋಡವ್ವಾ
ರುಂಡಮಾಲೆಯು ಕೊರಳವನ ಕಂಡರೆ
ಒಮ್ಮೆ ಬರಹೇಳವ್ವಾ
ಗೋವಿಂದನ ನಯನ ಉಂಗುಟದ ಮೇಲಿಪ್ಪುದು
ಚೆನ್ನಮಲ್ಲಿಕಾರ್ಜುನ ದೇವಂಗಿದು ಕುರುಹವ್ವಾ ||

5. ರಾಮಪ್ರಿಯ ಆದಿತಾಳ ಮಹಾದೇವಿಯಕ್ಕ

ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದಡೆಂತಯ್ಯ
ಸಮುದ್ರದ ತಡಿಯಲ್ಲೊಂದು ಮನೆಯ ಮಾಡಿ ನೊರೆತೆರೆಗಂಜಿದಡೆಂತಯ್ಯ
ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ
ಚೆನ್ನಮಲ್ಲಿಕಾರ್ಜುನ ಕೇಳಯ್ಯ
ಲೋಕದೊಳು ಹುಟ್ಟಿದ ಬಳಿಕ ಸ್ತುತಿ ನಿಂದೆ ಬಂದರೆ
ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು ||

6. ಹಿಂದೋಳ ಆದಿತಾಳ ಅಲ್ಲಮಪ್ರಭು

ಮಜ್ಜನಕ್ಕೆರೆದು ಫಲವ ಬೇಡುವರಯ್ಯ
ತನುಗೆಲ್ಲಿಯದೊ ಆ ಫಲವು ಸಿತಾಳಕ್ಕಲ್ಲದೆ ?
ಮಂಜನ ಪತ್ರೆ ಪುಷ್ಪದಲ್ಲಿ ಪೂಜಿಸಿ ಫಲವ ಬೇಡುವರಯ್ಯ
ತನುಗೆಲ್ಲಿಯದೊ ಆ ಫಲವು ಗಿಡಗಳಿಗಲ್ಲದೆ ?
ಸುಯಿದಾನವನರ್ಪಿಸಿ ಫಲವ ಬೇಡುವರಯ್ಯ
ತನುಗೆಲ್ಲಿಯದೊ ಆ ಫಲವು ಹದಿನೆಂಟು ಧಾನ್ಯಕ್ಕಲ್ಲದೆ ?
ಲಿಂಗದ ಒಡವೆಯು ಲಿಂಗಕ್ಕೆ ಕೊಟ್ಟು
ಫಲವ ಬೇಡುವ ಸರ್ವಾನ್ಯಾಯಿಗಳನು
ಏನೆಂಬೆ ಗುಹೇಶ್ವರ !

7. ಶುಭ ಪಂತುವರಾಳಿ ರೂಪಕತಾಳ ಮಹಾದೇವಿಯಕ್ಕ

ಅಯ್ಯ ನೀ ಕೇಳಿದರೆ ಕೇಳು ಕೇಳದಿದ್ದರೆ ಮಾಣು
ನಾ ನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯ
ಅಯ್ಯ ನೀ ಒಲಿದರೆ ಒಲಿ ಒಲಿಯದಿದ್ದರೆ ಮಾಣು
ನಾ ನಿನ್ನ ಪೂಜಿಸಿದಲ್ಲದೆ ಸೈರಿಸಲಾರೆ.
ಚೆನ್ನ ಮಲ್ಲಿಕಾರ್ಜುನ ನಿಮ್ಮ ಪೂಜಿಸಿ
ಹರುಷದಿ ಓಲಾಡುವೆ ಅಯ್ಯ ||

## ೧. ಸ್ವರ ಜತಿಗಳು

1. ಧನ್ಯಾಸಿ–ಗೋಪಾಲಲೋಲ–ಆದಿತಾಳ : ಸಗಮಪನಿಸ–ಸನಿದಪಮಗರಿಸ

ದಾ , ಪಾ , ಗಾ ; ರೀ ; ಸಾ । ನೀ , ದಾ ಪ ನೀ । ಸ ಗಾ ಮಾ ಪಾ ನಿ ॥
ಗೋ ಪಾ . ಲ . ಲೋ . ಲ । ಈ . ವೆ ಥ ತಾ । ಳ ಜಾ ಲ ಬಾ ಲ ॥ ಗೋಪಾಲ
ಸಾ ; ; ಗಾ ; ಮಾ ಪಾ ; । ; ಗಾ ; ಮಾ । ಪಾ ನೀ ಸಾ ನೀ ॥
ರಾ . . ಜಾ . ಧಿ ರಾ . । . ಜ . ವ । ರ ದ ರಾ ಜ ॥ ( ,, )
ಗಾ ಮ ಪ ನಿ ಸ ಗಾ ಮ ಪ ದ ಪ ಗಾ ರಿ ಸ । ಮ ಗ ಗ ರಿ ನೀ ದಾ । , ಪ ಗ ರೀ ಸ ಸ ನಿ ॥
ಗೋ ಪಿ ಕೆ ಲ ನು ಗಾ ರ ವ ಮುನು ಗಾ ಚಿ ನ । ಮ ನೋಹ ರ ನೀ ದಾ । . ನ ಸ ದಾ ನ ನಿ ರಿ ॥ ಗೋಪಾಲ
ಮಾ ಪ ಗಾ ಮಾ ಪ ಮ ಪಾ ಗಾ ರಿ ಸಾ । ಸ ಗಾ ಮ ಪ ನೀ ಸ । ಗ ಗಾ ರಿ ಸ ಸಾ ನಿ ॥
ನಂ ದ ಗೋ ವಿಂ ದ ಮು ಕುಂ ದಾ ಸ ದಾ । ಸೀ ತಾ ವ ರ ಮಾನ । ಮ ದೇ ಮಿ ರ ವೇ ಣು ॥ ಗೋಪಾಲ
ಪ ನಿ ದ ಪಾ ದ ಮ ಪ ಗಾ ಮ ಪ ಗಾ ರಿ ಸ । ಪ ಧ ಪ ನೀ ಸ ಗ ಮ । ಪ ಮ ಗಾ ರಿ ಸಾ ನಿ ॥
ಪ ದಯು ಗೆಂ ಬು ಲ ಕು ವ್ರೊ ಕ್ಕೆ ನು ಮಾ ಧ ವ । ಪ ದ ಯುಗಾ ನ ಮ ದಿ । ನಿ ಮ ದಿಂ ಚ ರಾ ದ ॥ ಗೋಪಾಲ
ನೀ ಸ ಪ ದ ಪ ನೀ ಸ ಗಾ ಮ ಪ ನಿ ಸಾ । ನಿ ಸ ಮ ಗಾ ರಿ ಸ ನಿ । ಸ ಗ ರಿ ನೀ ಸಾ ನಿ ॥
ವೇ ರು ದ ಲ ಚ ನೇ ಲ ಕೋ ರಿ ಕ ಲ ನು । ನೊ ಸ ಗ ವೇ ಮಿರ ನ । ರ ವ ರ ಸಂ ತಾ ನ ॥ ಗೋಪಾಲ
ಸಾ , ನಿ ದ ಪ ಪ ನಿ ನಿ ಸಾ ನಿ ದ ಪ ನಿ ನಿ । ಸಾ ನೀ ಸ ಪಾ ದ । ಮ ಪಾ ಗಾ ರೀ ಸ ॥
ಸಾ . ಮಿ ವ ರ ಕ ನ ಲ ದೇ ಲ ಪ ಗ ವ ಲ । ದಾ ಸಾ ಮಗಾ ನ । ವಿ ನೋ ದಾ ನು ತ ॥ ಗೋಪಾಲ
ಸ ಗಾ ಮ ಪ ನೀ ಸ ಗ ಮ ಗ ರಿ ಸ ಗ ರಿ ನಿ । ಸಾ ಪ ದ ಮ ಪಾ ಮ । ಗ ರಿ ಸಾ , ರಿ ಸ ನಿ ॥
ಸೀತಾ ವ ರ ಮಾನ ಪ ತಿ ಗ ತಿ ಮದಿ ನಿ ಸ । ದಾ ದ ಲ ಚಿ ದ ಕೊ । ಲಿ ಚಿ ದ . ಮದ ನ ॥ ಗೋಪಾಲ

2. ಅಠಾಣ : ಸಾಮಿನಿ ರಮ್ಮನವೇ–ತ್ರಿಶ್ರ ಏಕತಾಳ : ಸರಿಮಪನಿಸ–ಸನಿದಪಮಪಗಮರಿಸ

ಸಾ ; ಸಾ ನೀ ದಾ ; । ಪಾ ಮಾ ಪಾ ಗಾ ; ರೀ । ಸಾ ; ; ; ನೀ ಸಾ । ಗಾ ; ಮಾ ಪಾ ನೀ ಪಾ ॥
ಸಾ . ಮಿ ನಿ ರ . । ಮ್ಮ ನ ವೇ ವೇ . ಗ । ಮೋ. . . ದ ಯ । ಚೇ . ಸಿ ಯಿ ಪು ಡು ॥ ಸಾಮಿನಿ
ಸ ರೀ ಸ ನಿ ರಿ ಸ ನಿ ದಾ ; । ಪ ದಾ ಪ ಮ ದ ಪ.ಮ ಗಾ ; । ಮ ದಾ ಪ ಮ ಪ ಗ ಮಾ ರಿ ಸ ರಿ ॥
ಚ ಲಂ ಬು ವ ಲ ದ ನ ವೇ . । ಮು ದಂ ಬು ನ ರಿ ಪೆ ದ ವೇ . । ಯು ರಂ ಬು ದು ರು ಸು ರಂ ಬು ಯನು ॥
ನಿ ಸ ನಿ ರಿ ಸ ಪ ಮ ನಿ ಪ ಸ ನಿ ರಿ ॥
ಚಿ ದ ರೆ ನು ಪ ಲು ವ ಲು ವ ದ ಲೆ ನು ॥ ಸಾಮಿನಿ
ದಾ , ಪಾ ಮ ಗಾ ಮ ಪ ಮ ಪ । ದಾ ೯ ಪಾ ಮ ಗಾ ರಿ ಸ ನಿ ಸ । ದಾ ೯ ಪಾ ಮ ಪಾ ದ ಪ ಸ ನಿ ॥
ದಾ . ನಿಂ ಟಿ ಕೇ ಗು ಟ ಪ ಲು । ದಾ . ರಾ ಳ ಮೈ ಮ ನ ಸು ನಿ । ದಾ . ನಂ ಬು ತಾ ಮ ರ ಚಿ ಸ ॥
ದಾ ೯ ಪಾ ಮ ಪ ಪ ದ ನಿ ಸ ರಿ ॥
ದಾ . ವೇಂ ಟಿ ದಿ ರಿ ಗಿ ಗ ನೇಲ ॥
ದಾ ೯ ಪ ಮ ಪ ದಾ ೯ ಪ ಸ ನಿ । ದಾ ೯ ರಿ ಸ ನಿ ದಾ೯ ಪ ದ ನಿ ॥
ದಾ . ನಿ ಯ ನಿ ದಾ . ನಿ ಮಿ ತ । ದಾ . ತೆ ಲಿ ಯ ದಾ ಯನುಚು ॥ ಸಾಮಿ

ಸಾ ; ; ; ನಿರಿಸನಿ । ದಾ ಪ ದ ಪ ಮ ಗಾ ಮ ಪ ಗ ಮ । ರೀ ಸ ರಿ ಸಾ ; ; ಸ ನಿ । ಸಗಾಮ ಪನಿಪ ಸಾ ನಿ ರಿ ನಿ ।
ಸಾ . . . ರಸದಳ । ಲೋಚ ನು ಡೈ ನ . ಜೆ ಲುವು ಡು । ಕಾಮಿನಿ ತೊ. . ಸೊ ಗ । ಸುಗಾನು ಸರಸ ಮಾಡುಕೊನಿ ।
ಸಾ ; ; ; ನಿ ರಿ ಸ ನಿ । ದಾ ;;; ಪ ದ ಪ ಮ । ಗಾ ;;; ಮ ಪ ದ ಪ । ದಾ ; ; ; ಪ ದ ಪ ರಿ ।
ಹಾ . . . ಯಿ ಕ ನು ಸ । ದಾ ;;; ಕ ಲಿ ಸೆ ನು । ಆ ... ಯಿ ಟು ಗ ಲ । ದಾ . . . ಸ ದ ಯುಡು ।
ಸ ಗಾ ರಿ ಸ ನಿ ಸ ರೀ ಗ ರಿ ಸ । ನಿ ಸಾ ರಿ ಸ ನಿ ದಾ, ನಿಸರಿ । ಸ ನಿ ಸ ದಾ ಪ ಪ ಮ ಪ ಗಾ ರಿ ।
ಗೆ ಯಾ ಳಿಯೆಡ ಓಯ್ಯಾರಿ ನ ಡ । ಲ ಚು ಚುಕೊ ನಿ ದಾ. ನಿಸರಿ । ಎ ವ ರು ಲೇ ದ ನು ಚು ಲ ೦ ಚಿ ।
ಸ ನಿ ಸ ಗಾ ಮ ಪ ನಿ ಪ ಸ ನಿ ರಿ ॥
ನೆ ನ ರುಜಾ ಯ ತ ಗ ದ ನುಚುನು ॥ ಸಾಮಿನಿ

3. ತೋಡಿ–ಸಾಮಿಕಿ ಜಾಲಮೇಲನೆ–ಮಿಶ್ರ ಏಕತಾಳ–ಸರಿಗಮಪದನಿಸ–ಸನಿದಪಮಗರಿಸ

ಪಲ್ಲವಿ :

ಗಾ ; ಗ ರಿ ಗ ಮ ಗ ರಿ ರೀ । ಸಾ ; ಸಾ ಸ ನಿ ಧಾ ನೀ । ಸಾ ; ; ; ಧ ನಿ । ಸ ರಿ ಗಾ ರೀ ಸಾ ರಿ ಸ ರಿ ನಿ ।
ಸಾ . . . . . ಮಿ . ಕಿ । ಜಾ . ಲ . ಮೇ . ಲ । ನೇ . . . ಸ ಖಿ । ಯ. . ರೊ . ಯಿ ಪುಡು . । ಸಾಮಿಕಿ

ಅನುಪಲ್ಲವಿ :

ದಾ ; ಮಾ ದಾ ; ನೀ । ಸ ನಿದಾನೀಸರಿ ಸಾ ; ॥ ದನಿಸಾ ಸನಿನಿದ ಪಾ ; । ಮಗಪಮ ದಪಮಗ ರೀಸಾ ।
ಭೂ . ಮಿ ಲೊ . . । ಶ್ರೀ . . . ತಂ. ಜಾ. ॥ ಪು. ರಿ ಬೃ. . . ಹ . । ದೀ. ಶ್ವ. ರು. ಡೈ. ನ . ।
ಸಾಮಿಕಿ

ಮುಕ್ತಾಯಿಸ್ವರ :

ಗಾ ; ; ಗಾ ; ; । ರೀ ಮ ಗ ರೀ ಸಾ ಧಾ ನೀ । ಸಾ ; ; : ರೀ ಸಾ । ಧಾ , ನಿ ಸ ರಿ ಗಾ ರೀ ನೀ ।
ತಾಂ . . ತಾಂ . . । ತ ತ ನ ತ . ಝು ಣು । ಸಾ ; ; ; ರೀ ಸಾ । ದಾ , ನಿ ಸ ರಿ ಗಾ ರೀ ನೀ ।
ಭಾ , , ಮಾ.. । ಫು . ಣಿ ಸ ತ ತ ಮು । ಸಾ . .ಮಿ. ನಿ । ನ್ನೇ . ಮಿ ಗ ಲ ದ ಲ ಚಿ ।
ಸಾ , ರೀ , ಗಾ ಮಾ ಪಾ । ಗಾ , ಮಾ , ಪಾ ದಾ ನೀ । ಮಾ , ಪಾ , ದಾ ನೀ ಸಾ । ನೀ , ದಾ ನೀ ಸಾ ರೀ ।
ತ .ಜ್ಝೊಂ ತ ಕಿ ಟ । ಗಾ , ಮಾ , ಪಾ ದಾ ನೀ । ತ . ಣೊ ೯ ಕು ತ ಕ । ನೀ , ದಾ ನೀ ಸಾ ರೀ ।
ದಿ . ನಂ ಬು ನಿ ಗ । ಕ . ನಂ . ಬು ನ ನು । ಮ . ನಂ . ಬು ನ ನು । ಸ . ದಾ. ಚಿಂ ತ ನು ।
ನೀ , ಗ ರೀ ನೀ, ರಿ ಸಾ । ಪ ದ ನಿ ದ ಪ ಮ ಗ ಮ ದ ಮ ದ ನಿ । ಸಾ ; ; ; ಪ ದ ನೀ ।
ನಿ ದ ಗ ರೀ ನೀ ರಿ ಸಾ । ತ ಕ ಣ ಕ ತ ಕ ಜ ಣಿ ತ ಕ ದಿ ಮಿ । ತಾಂ. . . ಪ ದ ನೀ ।
ನೆಮ್ಮಿ ತಿ ತಾ ಳ ನು . । ಸ ರ ಸು ನಿ ತ್ವ ರಿ ತ ಮು ಗ ನೆ ನ ರು । ತೊ. . ಕೃಪ ಜೇ ಸಿ ।
ದ ಪಾ ಮ ಗ ಮ ಪ ಮ ಗ ರಿ ಸ ನಿ ।
ದ ಪಾ ಮ ತ ಕ ತ ಧಿಂ ಗಿ ಣ ತೊಂ . ।
ರ ಮ್ಮ ವೇ . ಚಿ . ಲಿ ಇ ಕ ನು । ಸಾಮಿಕಿ

ಚರಣ :

ಗಾ ; ಗಾ ; ಮಾ ಗಾ । ರೀ ಸಾ ಧಾ ; ನೀ ; । ಸಾ ; ದಾ ನೀ ಸಾ ಗಾ । ; ರೀ ಸಾ ; ರೀ ನೀ ।
ಪ್ರ . ದ್ಯು . ಮ್ನು ಡಿ । ದಿ ಗೊ ವ . ಜ್ಚಿ . । ರಾ . ಕು ಸು ಮ ಚಾ । . ಯ ಗಂ . ಬು ತೊ । ಪ್ರ
1. ಸಾ ; ; ರೀ ಗಾ ಮಾ । ಗಾ ; ; ಮಾದಾನೀ । ದಾ ; ಮಾ ಗಾ ರೀ ಸಾ । ನೀ ; ಸಾ ಧಾ ರೀ ನೀ ।
ಮಾ . . ರು ತ ಮು । ಲು . . ವಿ ಸ ರ । ಗಾ . ಮ ನ ಸು ನು । ತಾ . ಭ್ರ ಮ ಸಿ ತಿ । ಪ್ರ

2. ಪಾ; ; ದಾ ಪಾಮಾ । ಮಾ ; ; ಪಾ ಮಾಗಾ । ಗಾ ; ; ಮಾಗಾರೀ । ಸಾ ; ; ನೀ ಧಾ ನೀ । ಸಾ ; ; ; ; ದಾ ॥
ತು . .ಮ್ಮೆ ದ ಲು । ಝಂ .. ಮ್ಮೆ ನು ಚು ।ಮ್ರೊ . . ಯ ಗ ವಿ । ನಿ . . ವಿ ರ ಹ । ಮು . . . . ಮಿ ॥
ನೀ , ಸಾ , ರೀ ಗಾ ಮಾ । ಸಾ , ರೀ , ರೀ , ಗಾ , । ಗಾ, ಮಾ , ಪಾ ದಾ ನೀ । ಸಾ , ನೀ , ದಾ ಪಾ ಮಾ ॥
ತಿ . ಮೀ. ರೆ ನು ನೇ । ಬಿ . ರಾ . ನ . ಕಾ . । ವ . ವೇ . ತ ರು ಣಿ । ನಿ . ನ್ನೆ . ಇ ವ್ರ ಡು ॥
ಗಾ ; ; ರೀ ಸಾ ನೀ ॥
ಕೋ . . ರಿ ತಿ ನಿ ॥ ಪ್ರ

3. ಸಾ ; ; ರೀ ಸಾ ಸಾ । ನೀ ದಾ ನೀ ಸಾ ನೀ ನೀ । ದಾ ; ; ಗಾ ಮಾ ದಾ । ರೀ ಗಾ ಮಾ ದಾ ದಾ ನೀ ॥
ಕೋ . . ರಿ ಕ ಲ । ನು ಸೊ ಗ ಸು ಗ ಸ । ದಾ . . ಕ ಲಿ ಕಿ । ತೆ ಲಿ ಪಿ ತಿ ಮಿ ಲ ॥

ಸಾ ; ; ಗಾ ರೀ ನೀ । ಸಾ ರೀ ಸಾ ; ; ನೀ । ದಾ ; ; ; ; ನೀ । ಸಾ ; ನೀ ದಾ ಪಾ ಮಾ ॥
ಸಾ . . ರೆ ಕು ನು । ದ ಯ ತೋ . . ನು । ನೇ . . . . ಯ । ಪಾ . ರ ಮು ಗ ನು ॥

ಪಾ , ದಾ , ನೀ ಸಾ ; । ದಾ , ನೀ , ಸಾ ರೀ ; । ನೀ , ಗಾ , ರೀ ಸಾ ; । ನೀ , ಸಾ , ನೀ ದಾ ನೀ ॥
ದ .ಯಾ . ಕ ರು . । ನಿ . ಪ್ರೇ . ಮತೋ . । ನು . ಕೌ . ಗ ಲಿಂ . । ಚಿ . ಮು . ತ್ತು ಲಿಂ ಚಿ ॥

ಸಾ ರೀ ಸಾ ; ನೀ ದಾ । ಪಾ ; ಮಾ ಗಾ ರೀ ಸಾ । ; ಗಾ ರೀ ಸಾ ನೀ ಧಾ । ಪಾ ಮಾಗಾ ರೀ ಸಾ ನೀ ॥
ರ ತಿ ಸೇ . ಯು ಟ । ಕು . ಸ ಮಯ ಮು । . ಸ ದ ಯು ನಿ ಯ । ವಿ ದ ಪಿ ಲು ವ ವೇ ॥ ಪ್ರ

4. ಯದುಕುಲ ಕಾಂಭೋಜಿ–ಸರೋಜಾಕ್ಷಿರೋ–ರೂಪಕತಾಳ : ಸರಿಮಪದಸ–ಸನಿದಪಮಗರಿಸ

ಪಲ್ಲವಿ :

; ಪ ದ ಸಾ ; ಸಾ ; । ನೀ ನಿ ಸಾ ನಿ ದಾ ದಾ ನಿ ದ ದ ಪ । ; ಪಾ ಪ ಮ ಪ ದಾ ; ಮಾ ಮಾ ॥

. ಸ . ರೋ . ಜಾ. । ಕ್ಷಿ ರೋ . . . ನಾ . . . . । . ಸಾ ಮಿ . . . . . . ॥

ಪಾ ದ ಪ ದ ಪ ಮ ಗ ರಿ ಮ ಗ ಸ ರೀ॥

ಈ . . . . ವೇ . . . . ಳ . ॥

; ಮ ಗ ಸಾ ; ನಿ ಫ ಧಾ । ಸಾ ಪ ನಿ ಸಾ , ರಿ ಗಾ , ರಿ ರೀ ; । ; ರೀ ಸ ರೀ ; ಮಾ ಪಾ ಮ ಗಾ , ।
. ಸ ರ ಸ . . . ಕು । ತೋ . . . . . . . . ಡಿ . । .ತೋ. . . ವೇ . . . . ।
ಮ ಗ ಮ ರಿ ಸಾ ರಿ ಗ ರಿ ರೀ ಮ ಗ ಗ ರಿ ರಿ ಸ ಸಾ ॥

. . . . . . . . . . . . . . . . . ॥

ಅನುಪಲ್ಲವಿ :

; ಸ ರಿ ಮಾ ; ಮ ಗ ಸ ರಿ । ಮ ಪ ಮಾ ಮ ಪ ಮ ಪ ದಾ ಪಾ ದ ಪ ಪ ಮ । ; ಮ ಪ ದಾ ; ದಾ ದಾ ॥

.ಮೋ ರು . ವಿ . . . । ಲ್ತು . . ಡ್ಯೆ . . . . . ನ . . . । . ತಂ ಜ . . ಬ್ರ ಹ ॥
ದಾ ದ ನಿ ದ ಪ ಮ ದಾ ಪ ಮ ಮ ॥
ದೀ . . . ಶ್ವ . ರು . ಡು . ॥

ಗ ಸಾ ಪ ದ ಸಾ ; ಸಾ ; । ನೀ ನಿ ಸಾ ನಿ ದಾ ದಾ ನಿ ದ ದ ಪ । ಪಾ ಪ ಮ ಪಾ ದಾ ; ಪ ದ ।
. . ವೇ . ರು . ಗಾ . । ನೆಂ . ಚಿ . ನಾ . . . . . । ವಿ ಧ . ಮು . . ಲ ರ ।
ಪಾ ; , ಮ ಗ ಸ ರಿ ಮ ಪ ದ ॥
ಸೇ . . ಯಿ . ಪು . ಡು . . ॥

ಮುಕ್ತಾಯಿಸ್ವರ :

ಸಾ , ಸ ನಿ ಪ ದ ನಿ ದ ದ ಪ ಮ ॥ ಪಾ , ನಿ ದ ಪ ಮ ಗ ರಿ ಮ ಗ ರಿ ॥ ಸಾ , ಪಾ ದ ಸ ನಿ ಸ ರಿ ಗ ಸ ॥
ತಾಂ . ತ ಕಿ ಟ ತ ಕ ಣ ಕ ಝಣು ॥ ಪಾ , ನಿ ದ ಪ ಮ ಗ ರಿ ಮ ಗ ರಿ ॥ ವಾ . ದೇ ಲ ಯಿಕ ತ ಕ ದ ನ ॥
ರೀ , ಪ ಮ ಗ ಸಾ ರಿ ಮ ಪ ದ ॥
ವೇ . ಪ ದ ವೇ . ರಿ ಮ ಪ ದ ॥

ಗ ರಿ ರಿ ಗ ರಿ ರೀ ಗ ರಿ ಸ ರೀ ॥ ರಿ ಗ ರಿ ರೀ ಸ ಸ ನಿ ನಿ ದ ಪ ಮ ॥ ಪ ದ ದ ಸಾ ಸ ಸ ನಿ ನಿ ದ ಪ ಮ ॥
ತ ಕ ಜೊಂ. ತ ರಿ ಕುಂ ತ ರಿ ತಾ ॥ ರಿ ಗ ರಿ ರೀ ಸ ಸ ನಿ ನಿ ದ ಪ ಮ ॥ ಚೆ ಲಿಯ ನೀ ಕುತೆ ಲುಪ ವ ಲ ನು ॥
ಮ ಪ ದ ಪಾ ಮ ಗ ಸ ರಿ ಮ ಪ ದ ॥
ತ ಕಿ ಟ ಜಂ ತ ಕ ತ ಧಿಂ ಗಿ ಣ ತೊಂ ॥ ಸರೋಜಾಕ್ಷಿ

ಚರಣ–ಮಧ್ಯಮಕಾಲ :

ಗಾ ; ಗಾ ; ಗಾ ; । ; ಮಾ ಪಾ ಮಾ ಗಾ; । ರೀ ; ರೀ ; ರೀ ; । ; ; ರೀ ಮಾ ಗಾ ರೀ ॥
ಮಾ . ರು . ಡು . । . ಶ ರ ಮು ವೇ. । ಮಾ. ರು . ನಾ. । . . ಯುರ ಮು ನ ॥
ಸಾ ; ಸಾ ; ಸಾ ; । ; ; ; ; ; ನೀ । ಸಾ ರೀ ಮಾ ಗಾ ಗಾ ರೀ । ಸಾ ಪಾ ; ಧಾ ಸಾ ರೀ ॥
ದೂ . ಸೇ . ಸೇ . । . . . . . ಆ । ಸ ದ. ಯು . ನಿ ನು । ಲ ರಂ . ಮ್ಮ ನ ವೇ ॥ ಮಾರುಡು
1. ಸಾ ; ; ಫಾ ; ಧಾ । ಸಾ ; ; ರೀ ಗಾ ಸಾ । ರೀ ; ; ಮಾ ಗಾ ರೀ । ಸಾ ; ಫಾ ಧಾ ಸಾ ರೀ ॥
ರೇ . . ರಾ . ಜು । ಗಾ . . ಗ ಲು ಕು । ನೇ . . ಮ ನ ಸು । ಲೋ. ರ್ತು ನೇ ಚೆ ಲಿ ॥ ಮಾರುಡು
2. ದಾ, ಪ ಮಾ ಗಾ ಸಾ ರೀ । ಮಾ ಗ ಪಾ ಮಾ ದಾ ಮಾ।ಪಾ, ನಿ ದಾ ಪಾ , ಮ ಗಾ । ರೀ, ಮ ಗಾಸಾ,ಸ ರೀ ॥
ತು. ಮ್ಮೆ ದ ಲ್ಯೂ ಯೆ ಗ । ಸೊ ಮ್ಮ ಸಿ ಲ್ಲಿ ತೆ ನೇ ।ರ . ಮ್ಮ ನಿ ಕ . ಮ್ಮವೋ। ವಿ. ಮ್ಮನೆ ವೇ.ಗವೋ॥
ಮಾರುಡು

3. ನೀ ದಾ; ದಾ ಪಾ ಮಾ । ಪಾ ದಾ ಪಾ ಮಾ ಗಾ ಮಾ । ರೀ ಮಾ ; ಮಾ ಗಾ ಸಾ । ರೀ ಪಾ ಮಾ ಗಾ ಸಾ ರಿ ॥
ಪ ರಾ. ಕಿ ಗ ದ । ಗ ದ ನ ಚು ನ ನು । ಪಿ ರಾ . ಳಿ ಡೋ ರ । ದಿ ಚ ಲು ಡು ನ ಡು ॥
ಮಾ ಪಾ; ದಾ ಸಾ ಪಾ । ದಾ ಸಾ ನೀ ದಾ ಪಾ ಮಾ । ನೀ ದಾ ಪಾ ಮಾ ಗಾ ರೀ । ಸಾ ಫಾ ; ಧಾ ಸಾ ರೀ ॥
ವ ರಾ. ಯ ನಿ ದು । ರು ಸು ಗ ಯಿ ಪು ಡು । ಪಿ ಲು ವ ವೇ ಚೆ ಲಿ । ಯ ನೋ. ರ್ವ ನಿ ಗ ॥
ಮಾರುಡು

4) ಸಾ ; ; ಸಾ ನೀ ದಾ । ಪಾ ; ; ಮಾ ಗಾ ಸಾ । ರೀ ; ; ಸಾ ರೀ ರೀ । ಮಾ ಮಾ ಪಾ ಪಾ ದಾ ದಾ ॥

ಸಾ . . ರೆ ಕು ನು । ಬಾ . . ಯೆ ಡ ನಿ । ನ್ನೆ . . ಸ್ಥಿ ರ ಮು । ನ ದ ಲ ಚಿ ತ್ತ ನಿ ।
ಸಾಸಾ ನೀ ದಾ ಪಾ ಮಾ । ಪಾ ನೀ ದಾ ಪಾ ಮಾ ಗಾ । ರೀ ಮಾ ಗಾ ಸಾ ರೀ ಮಾ ।

ವೇ ರು ಜೇ ಸಿ ಇ ಕ । ರಾ ನಿ ಮಾ ಯ ಮೋ ಮೋ । ಏ ಮಿ ಜೇ ತು ನಿ ಗ ॥
ಗಾ ; ಮಾ ಪಾ ದಾ ಪಾ ॥

ಭಾ . ಮ ವಿ ನ ವೇ ॥
ಮಾ ಗಾ ; ಪಾ ದಾ ; । ನೀ ದಾ ; ಪಾ ಮಾ ಗಾ । ಸಾ ರೀ ; ಮಾ ಪಾ ದಾ । ಸಾ ಪಾ ದಾ ಸಾ ಸಾ ; ॥

ನಾ ಮೋ . ಹ ಮಿಂ . । ತ ಜೇ ಸಿ ನ ದಿ । ನೇ ನೊ ರ್ವ ರಿ ಗ । ತೆ ಲು ಪು ದು ನೇ .
ಪಾದಾಸಾಸಾ; ನೀ । ಸಾರೀಗಾ ರೀರೀ; । ರೀಮಾಗಾ ಗಾ; ರೀ । ಸಾರೀಗಾರೀ ನೀ ; ॥

ವಿ ರು ಲ ಸೇ. ಯ ॥ ಪ್ನೆನಿ ಸುಂ ದ ನು.॥ ರ ಗ ಪೋ . ತೆ ॥ ಆ ದಿ ಸ ರ ವ್ಯ. ॥
ದೀ ರೀ ಸಾ ಸಾ; ನೀ ॥ ದಾಪಾ ಮಾದಾಪಾಪಾ ॥ ; ಮಾ ಗಾ ರೀ ಸಾ ನೀ ॥ ದಾ ಪಾ; ದಾ ಸಾ ರೀ ॥

ಗ ತಿ ಮೋ ನೇ ಯಿ ॥ ಪು ಡು ಸು ದ ತಿ ರೊ ॥ . ಮ ದ ನಿ ಕ ಲ ॥ ಯ ರ ಮ್ಮ ನ ವೇ ॥
ಮಾರುಡು.

5 ಹುಸೇನಿ–ಏಮುಂತಯಾನರಾ–ರೂಪಕತಾಳ : ಸರಿಗಮಪನಿದನಿಸ–ಸನಿದಪಮಪಗರಿಸ

ಪಲ್ಲವಿ :

ಸಾ; ಪಾ; ಮಾ; ॥ ಮಾ ಪಮ ಪಾನಿದ ನೀನೀ ॥ ಸಾ; ಸನಿನಿ ದ ಪಾ ದ ಪ ॥ ಮಗಮಪಾ, ಮಪಮಗರಿ ನಿ ॥
ಏ . ಮುಂ ತ . ॥ ಯಾ . . . . . . ನ ॥ ರಾ. . . . . . ನ . ॥ ಸಾ. . . . . . . .ಮಿ . ॥
ಗಾರೀ ಗಾ ; ಮಾ; ॥ ; ಮಗಪ ಮ ಗರಿರೀ ಗರಿ ॥ ಸಾ ; ; ; ಸ ನಿಸಾ ॥ ರಿ ಗ ಮ ಪ ದ ಪ ಮ ಪ ಮ ಗ ರಿ ಸಾ ॥
ನೀಕೇ ಮಂ . ದು . ॥ . ಪೆ . . ಟ್ಟೆ . . . ನು. ॥ ರಾ . . . ನಾ . . ॥ ಸಾ . . . . . . . . . . ಮಿ . . ॥
ಪಾ ; ಸಾ; ಸ ನಿನಿದ ॥ ಪಾ ; ; ಪಾ ದಪಮಾ ॥ ; ಪಾನೀ ; ನಿ ದದಾ ॥ ನಿ ಸ ನೀ ನಿಸರೀಸಾ ; ॥
ಕಾ . . . ಮಿ . . . ॥ ನಿ . . ಜ ನ . . ॥ . ಚಿ . . ತ್ತ . . ॥ ಚೋ. . . . . ರ . ॥

ಅನುಪಲ್ಲವಿ :

;ನಿ ದನೀ ; ಸ ನಿಸಾ ॥ ; ರೀ ಸ ರಿ ಗಾಗ ರಿರೀ ॥ ಸಾ; ಸನಿಸರಿ ಸಾ ; ॥ ; ಸ ನಿ ರಿ ಸನಿದಪಾಮಾ ॥
.ಘ .ನು . ಡಾ . . ॥ . ಪ್ರ . ತಾ . . ಪ . ॥ ಸಿಂ . . . . ಹ . ॥ . ವ . ಜೀ . . ರ . . ॥
; ನಿ ದನೀ ; ಸ ನಿಸಾ॥ ; ರೀಸ ರಿಗಾಗರಿರೀ ॥ ಸಾ; ಸನಿಸ ರಿ ಸಾ; ॥ ; ಸ ನಿರಿ ಸ ನಿ ದ ಪಾಮಾ ॥
. ಪ್ರೇ . . . ಮ. . ॥ . ಮಿೂರ . . . ಗ . ॥ ನ . . . . . ನ್ನು. ॥ . ಜೇ . ರ. . . . . . ॥
; ಪ ಪ ಸಾ; ಸಾ ; ॥ ; ಮಾ ಪಾ ಸನಿನಿದದಾ ॥ ಪಾದಪ ಮಾಪಮಗಾರೀ ॥ ಗಾ, ಮ ಪಾಮಪ ಮಗ ರಿ ಸ ॥
.ಪಿ ಲಿ ಚಿ . ತೇ . ॥ . ರಾ ವೇ . . . .ಮಿ ॥ ನೀ . . ಕಿ . . ದಿ . ॥ ಮೋ. . . . . . . ರ . . ॥

